

ಹಂಪಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಎಂ.ಫಿಲ್. ಪದವಿಯ ಸಂಪ್ರಬಂಧ

# "ರಾಜೇಶ್ವರಿ ತೇಜಸ್ವಿರವರ 'ನನ್ನ ತೇಜಸ್ವಿ' ಒಂದು ಅಧ್ಯಯನ"

ನೋಂದಣಿ ಸಂಖ್ಯೆ:

೧೪೦೭೦೧೦೩೦೦೬೩



೨೦೧೪-೧೫





ಹಂಪಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಎಂ.ಫಿಲ್. ಪದವಿಯ ಸಂಪ್ರಬಂಧ

# "ರಾಜೇಶ್ವರಿ ತೇಜಸ್ವಿರವರ 'ನನ್ನ ತೇಜಸ್ವಿ' ಒಂದು ಅಧ್ಯಯನ"

ನೋಂದಣಿ ಸಂಖ್ಯೆ:

೧೪೦೭೦೧೦೩೦೦೬೩

ವಿದ್ಯಾರ್ಥಿ ಹೆಸರು
ಶೋಭಾ ಬಿ. ಎಸ್

ಮಾರ್ಗದರ್ಶಕರು
ಡಾ. ಬಿ.ಎ. ಅನ್ನದಾನೇಶ್

೨೦೧೪-೧೫

# "ರಾಜೇಶ್ವರಿ ತೇಜಸ್ವಿರವರ 'ನನ್ನ ತೇಜಸ್ವಿ' ಒಂದು ಅಧ್ಯಯನ"

## ಪರಿವಿಡಿ

# ಅಧ್ಯಾಯ-೧

## ಸಂಶೋಧನೆಯ ಉದ್ದೇಶ ಮತ್ತು ವ್ಯಾಪ್ತಿ

**ಪೀಠಿಕೆ:** ಕನ್ನಡದ ಸಮಕಾಲೀನ ಸಾಂಸ್ಕೃತಿಕ ಸಂದರ್ಭದಲ್ಲಿ ನಾವು ಯಾರೇ ಒಬ್ಬ ಲೇಖಕರ ಸಾಧನೆ ಕುರಿತು ಯೋಚಿಸುವಾಗ ಎರಡು ಮುಖ್ಯ ಮಾನದಂಡಗಳು ಅಗತ್ಯ ಎನಿಸುತ್ತದೆ.

ಒಂದು, ಲೇಖಕನೊಬ್ಬ ತನ್ನ ಸುತ್ತಲಿನ, ತಾನು ಕಂಡ, ಕೇಳಿದ ಬದುಕನ್ನು ಎಷ್ಟು ಸೃಜನಶೀಲವಾಗಿ, ಮಾನವೀಯವಾಗಿ ದಾಖಲಿಸಿದ ಎಂಬುದು ನಮ್ಮ ಬಹುಪಾಲು ಬರಹಗಾರರು ಸಮಾಜವಾದಿ ಚಿಂತನೆ, ಹೋರಾಟ, ಹಾಗೂ ರಾಜಕೀಯವನ್ನು ತಮ್ಮ ಚಟುವಟಿಕೆಯ ಭಾಗ ಮಾಡಿಕೊಂಡಿದ್ದರಾದ್ದರಿಂದ ನಾವು ಪರಿಶೀಲಿಸಬೇಕಾದ ಇನ್ನೊಂದು ಅಂಶವೂ ಇದೆ. ಅದು ಇವರೆಲ್ಲಾ ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆ ಬಲಪಡಿಸಲು, ಪ್ರಜಾಸತ್ತಾತ್ಮಕ ಆಶಯಗಳಿಗೆ ಶಕ್ತಿ ತುಂಬಲು ಎಷ್ಟು ಶ್ರಮಿಸಿದರೆಂಬುದು.

ಈ ನಿಟ್ಟಿನಲ್ಲಿ ತೇಜಸ್ವಿ ಸೃಜನಶೀಲ ಲೇಖಕರಾಗಿ ತನ್ನ ಸುತ್ತಲಿನ, ತಾನು ಕಂಡ, ಕೇಳಿದ ಬದುಕನ್ನು ಸೃಜನಶೀಲವಾಗಿ ದಾಖಲಿಸಿದ್ದಾರೆ ಮತ್ತು ಡೆಮಾಕ್ರಟಿಕ್ ಎಂಬ ಮುಖವಾಡ ತೊಟ್ಟುಕೊಂಡಿರುವ ವ್ಯವಸ್ಥೆಗೆ ಪ್ರಜಾಪ್ರಭುತ್ವದ ನಾನಾ ಮೌಲ್ಯ ಮತ್ತು ಪಾಠಗಳನ್ನು ಸರ್ಕಾರಗಳಿಂದ ದೂರವಿದ್ದು, ಜನರನ್ನು ಎಚ್ಚರಿಸುವ ಮೂಲಕ ಕಲಿಸಿದಂತಹವರು ತೇಜಸ್ವಿ.

ಅನುಭವಗಳನ್ನು ಹುಡುಕಿಕೊಂಡು ಮೈಸೂರಿನಿಂದ ಹೊರಟ ತೇಜಸ್ವಿ ಪ್ರಕೃತಿ ಮಧ್ಯೆ ಬದುಕುತ್ತಾ, ಬರೆಯುತ್ತಲೇ ಕನ್ನಡ ಸಮುದಾಯದ ಸಾಂಸ್ಕೃತಿಕ ಪ್ರಜ್ಞೆಗೆ ಇನ್ನೊಂದಿಷ್ಟು ವಿವೇಕ, ಮನುಷ್ಯತ್ವ, ಜ್ಞಾನ ತುಂಬಿದವರು. ಇಂತಹ ಮೇರು

ವ್ಯಕ್ತಿತ್ವವನ್ನು ಇನ್ನೂ ಹೆಚ್ಚಾಗಿ ತಿಳಿಯಲು ಶ್ರೀಮತಿ ರಾಜೇಶ್ವರಿ ತೇಜಸ್ವಿ ಬರೆದಿರುವ "ನನ್ನ ತೇಜಸ್ವಿ" ಯನ್ನು "ರಾಜೇಶ್ವರಿ ತೇಜಸ್ವಿರವರ 'ನನ್ನ ತೇಜಸ್ವಿ' ಒಂದು ಅಧ್ಯಯನ" ಎಂಬ ಶೀರ್ಷಿಕೆಯಡಿಯಲ್ಲಿ ಈ ವಿಷಯವನ್ನು ನನ್ನ ಅಧ್ಯಾಯನಕ್ಕೆ ಆಯ್ಕೆ ಮಾಡಿಕೊಂಡಿದ್ದೇನೆ.

**ಉದ್ದೇಶ ಮತ್ತು ವ್ಯಾಪ್ತಿ :**

ತೇಜಸ್ವಿ ಒಬ್ಬ ಶ್ರೇಷ್ಠ ಲೇಖಕರು, ಶ್ರೇಷ್ಠ ಲೇಖಕನ ವಿಚಾರಗಳು ಎಷ್ಟು ಮುಖ್ಯವೋ ಹಾಗೇ ಅವರ ಬದುಕು ಕೂಡ ಅಷ್ಟೇ ಮುಖ್ಯ. ತೇಜಸ್ವಿ ಅವರ ಬದುಕಿನ ಹಲವಾರು ಮಜಲುಗಳು ಅವರ ಬರಹಕ್ಕೆ ಪ್ರೇರಣೆಯಾಗಿವೆ. ಅವರ ಸುತ್ತಲಿನ ಪರಿಸರ ಅವರನ್ನು ಮಹಾನ್ ಲೇಖಕ, ವಿಚಾರವಾದಿ, ವಿಜ್ಞಾನಿ, ಹೋರಾಟಗಾರ, ಛಾಯಚಿತ್ರಗಾಹಕನಾಗಿ ರೂಪಸಿದ ಬಗೆ ವಿಸ್ಮಯ.

ನನ್ನ ಅನುಭವದ ಹಿನ್ನಲೆಯಲ್ಲಿ ಗಂಡನ ಬಗ್ಗೆ ಹೆಂಡತಿಯು ಜೀವನ ಚರಿತ್ರೆಯನ್ನು ಬರೆದ ಉಲ್ಲೇಖವಿಲ್ಲ. ಪಾಶ್ಚಾತ್ಯ ಸಾಹಿತ್ಯದಲ್ಲಿ ಇರಬಹುದೇನೋ ಆದರೆ ಅದರ ಅರಿವು ನನಗಿಲ್ಲ. ರಾಜೇಶ್ವರಿರವರ ಜೊತೆ ತೇಜಸ್ವಿ ಅಷ್ಟು ಸುಧೀರ್ಘವಾಗಿ ಜೀವನ ನಡೆಸಿದ ಅನುಭವಗಳು, ಒಬ್ಬ ಹೆಣ್ಣಿನ ಕಣ್ಣಲ್ಲಿ ತೇಜಸ್ವಿಯ ವ್ಯಕ್ತಿತ್ವ ಹೇಗೆ ಮೂಡಿಬಂದಿದೆ, ತೇಜಸ್ವಿಯವರು ಸ್ವಾವಲಂಬಿಯಾಗಿ ಬದುಕಲು ತಮ್ಮ ಜೀವನವನ್ನು ಒಡ್ಡಿದಂತಹ ಪರಿ, ಅವರ ಬದುಕು-ಬರಹ, ಜೀವನ ಚರಿತ್ರೆಯ ಮಹತ್ವ, ತೇಜಸ್ವಿ ಕುವೆಂಪುರವರ ವಿಶ್ವಮಾನವ ಸಂದೇಶವನ್ನು ಸಾರಿದ ಪರಿ, ಅವರ ಬದುಕಿನ ಅನುಭವಗಳು ಮತ್ತು ತೇಜಸ್ವಿಯಿಂದ ಈಗಿನ ಯುವ ಪೀಳಿಗೆ ಪಡೆದ ಸಂದೇಶ, ತೇಜಸ್ವಿ ಅವರು ಯುವಕರಿಗೆ ನೀಡಿದ ಸಂದೇಶ ಈ ಎಲ್ಲಾ ಅಂಶಗಳನ್ನು "ರಾಜೇಶ್ವರಿ ತೇಜಸ್ವಿರವರ 'ನನ್ನ ತೇಜಸ್ವಿ' ಒಂದು ಅಧ್ಯಯನ" ಎಂಬ ಕಿರು ಪ್ರಬಂಧದ ಮೂಲಕ ಈ ಮೇಲ್ಕಂಡ ವಿಷಯಗಳನ್ನು ಅಧ್ಯಯನಕ್ಕೆ ಒಳಪಡಿಸುವುದೇ ನನ್ನ ಈ ಅಧ್ಯಯನದ ಉದ್ದೇಶವಾಗಿದೆ.

ಜೀವನ ಚರಿತ್ರೆ ಎಂಬವುಗಳು ಒಬ್ಬ ವ್ಯಕ್ತಿಯನ್ನು ಆಳವಾಗಿ ತಿಳಿದುಕೊಳ್ಳಲು ಉಪಯೋಗಕಾರಿಯಾಗಿವೆ. ಅಷ್ಟೇ ಅಲ್ಲದೆ ಆ ವ್ಯಕ್ತಿಗಳು ಬೆಳೆಯಲು ಅವರ ಸುತ್ತಾ ಮುತ್ತಲಿನ ಪರಿಸರ ಹೇಗೆ ಕಾರಣವಾಯಿತು, ಇಡೀ ಸಮಾಜ ಆ ವ್ಯಕ್ತಿಯನ್ನು ಹೇಗೆ ರೂಪಿಸಿತು ಎಂಬುದನ್ನು ತಿಳಿದುಕೊಳ್ಳಲು ಸಹಕಾರಿಯಾಗಿವೆ.

ಕುವೆಂಪುರವರು ರಾಮಕೃಷ್ಣ ಪರಮಹಂಸ ಮತ್ತು ವಿವೇಕಾನಂದರ ಬಗ್ಗೆ ಜೀವನ ಚರಿತ್ರೆ ಬರೆದರು ಅವು ಸಾಹಿತ್ಯಿಕ ದೃಷ್ಟಿಯಿಂದ ಅತ್ಯುತ್ತಮವಾಗಿ ಮೂಡಿ ಬಂದಿವೆ.

ಕುವೆಂಪುರವರ ಬಗ್ಗೆ ಕುವೆಂಪುರವರ ಮಗ ಪೂರ್ಣಚಂದ್ರ ತೇಜಸ್ವಿ 'ಅಣ್ಣನ ನೆನಪು' ಕೃತಿಯ ಮೂಲಕ ಕುವೆಂಪುರವರ ವ್ಯಕ್ತಿತ್ವವನ್ನು ತಿಳಿಸಿದ್ದಾರೆ. ಅದೇ ರೀತಿ ಕುವೆಂಪುರವರ ಮಗಳು ತಾರಿಣಿ ಚಿದಾನಂದ ರವರು 'ಮಗಳು ಕಂಡ ಕುವೆಂಪು' ಎಂಬ ಕೃತಿಯ ಮೂಲಕ ಕುವೆಂಪುರವರು ನಡೆದು ಬಂದ ದಾರಿ ಮತ್ತು ಒಬ್ಬ ಮಗಳಾಗಿ ತಂದೆಯನ್ನು ಕಂಡ ರೀತಿಯನ್ನು ವಿವರಿಸಿದ್ದಾರೆ.

ಕುವೆಂಪು ಕುಟುಂಬದಲ್ಲಿಯೇ ಹಲವಾರು ರೀತಿಯ ಜೀವನ ಚರಿತ್ರೆಗಳು ಹುಟ್ಟಿವೆ ಪೂರ್ಣಚಂದ್ರ ತೇಜಸ್ವಿಯವರನ್ನು ಕುರಿತು ರಾಜೇಶ್ವರಿ ತೇಜಸ್ವಿರವರು 'ನನ್ನ ತೇಜಸ್ವಿ' ಎಂಬ ಜೀವನ ಚರಿತ್ರೆಯನ್ನು ಬರೆದಿದ್ದಾರೆ. ಇದರಲ್ಲಿ ರಾಜೇಶ್ವರಿ ಕಂಡಂತೆ ತೇಜಸ್ವಿಯನ್ನು ರೂಪಿಸುವ ಕಾರ್ಯವನ್ನು ಮಾಡಿದ್ದಾರೆ. ಈ ಕೃತಿಯಲ್ಲಿ ಮೂಡಿ ಬಂದಿರುವ ತೇಜಸ್ವಿಯವರ ವ್ಯಕ್ತಿತ್ವ, ಅವರು ತಮ್ಮ ಬದುಕನ್ನು ಕಟ್ಟಿಕೊಂಡು ಸ್ವಾವಲಂಬಿಯಾಗಿ ಬದುಕನ್ನು ಸಾಗಿಸಿದ್ದಾರೆ. ಪ್ರಸ್ತುತ ಕಿರು ಪ್ರಬಂಧವು 'ನನ್ನ ತೇಜಸ್ವಿ' ಯಲ್ಲಿ ಮೂಡಿ ಬಂದಿರುವ ತೇಜಸ್ವಿಯವರ ವ್ಯಕ್ತಿತ್ವದ ವಿಶ್ಲೇಷಣೆಯ ವ್ಯಾಪ್ತಿಯನ್ನೊಳಗೊಂಡಿದೆ.

# ಅಧ್ಯಾಯ-೨

## ಜೀವನ ಚರಿತ್ರೆಯ ಹಿನ್ನೆಲೆ ಮತ್ತು ವ್ಯಾಖ್ಯಾನ

ಜೀವನ ಚರಿತ್ರೆಯೂ ಪಾಶ್ಚಾತ್ಯರಿಂದ ನಮಗೆ ಬಂದ ಸಾಹಿತ್ಯ ಪ್ರಕಾರ. ಜೀವನ ಚರಿತ್ರೆ ಸಾಮಾನ್ಯವಾಗಿ ಎಲ್ಲಾ ದೇಶಗಳಲ್ಲಿ ಸಮಾಜದ ಮುಂದೆ ಆದರ್ಶಗಳು ಕಣ್ಣಿಗೆ ಕಟ್ಟುವಂತೆ ನಿಲ್ಲಿಸುವ ಉದ್ದೇಶದಿಂದ ರಚಿತವಾದವು. ಕ್ರಮೇಣ ಆರಾಧನೆಯ ಮನೋಭಾವ ಕಡಿಮೆಯಾಗಿ, ವ್ಯಕ್ತಿತ್ವವನ್ನು ಕಡೆದು ನಿಲ್ಲಿಸುವ ಉದ್ದೇಶ ಕಾಣುತ್ತದೆ. ಅನಂತರ ಮನಸ್ಸಿನ ವಿಶ್ಲೇಷಣೆಯತ್ತ ಆಸಕ್ತಿ ಹರಿಯುತ್ತದೆ. ಲಿಟನ್ ಸ್ಟ್ರಾಚಿ ಎಂಬಾತ ಇಂಗ್ಲೀಷ್ ಭಾಷೆಯಲ್ಲಿ ಬರೆದ 'ಎಮಿನೆಂಟ್ ವಿಕ್ಟೋರಿಯನ್ಸ್' ಈ ದೃಷ್ಟಿಯಿಂದ ವಿಶಿಷ್ಟ ಕೃತಿ ಒಬ್ಬ ವ್ಯಕ್ತಿಯನ್ನು ಓದುವವರ ಕಣ್ಣಿನಲ್ಲಿ ಇಳಿಸುವುದೇ ಉದ್ದೇಶ ಹೊಂದಿದ ಜೀವನ ಚರಿತ್ರೆಗಳೂ ಇವೆ. ಇಂತಹ ಕೃತಿಯನ್ನು 'ಡಿಬಂಕಿಂಗ್ ಬಯಾಗ್ರಫಿ' ಎಂದು ಕರೆಯುತ್ತಾರೆ. ವಿನ್ಸ್ಟನ್ ಚರ್ಚಿಲ್ ಬರೆದ 'ಲೆನಿನ್' ಇಂತಹ ಪುಸ್ತಕ.

ಗದ್ಯ ಪ್ರಕಾರಗಳ ಪೈಕಿ ಒಂದಾದ ಜೀವನ ಚರಿತ್ರೆಯ ಬೆಳವಣಿಗೆ ಸಂಖ್ಯೆಯ ದೃಷ್ಟಿಯಿಂದ ಗಣನೀಯವಾಗಿದೆ. ಕರ್ನಾಟಕದ ತುಂಬ ಹರಡಿರುವ ವೀರಗಲ್ಲು, ಮಾಸ್ತಿಗಲ್ಲು, ಶಿಲಾಶಾಸನಗಳಲ್ಲಿ ವ್ಯಕ್ತಿಗಳ ಜೀವನಕ್ಕೆ ಸಂಬಂಧಿಸಿದ ಹಲವಾರು ವಿಷಯಗಳು ಕಾಣಸಿಗುತ್ತವೆಯಾದರೂ, ಇದೊಂದು ಸ್ವತಂತ್ರ ಪ್ರಕಾರವಾಗಿ ಬೆಳೆದು ಬಂದುದನ್ನು ಇತ್ತೀಚೆಗೆ ೨೦ ನೇ ಶತಮಾನದ ಆದಿಯಿಂದ ಪ್ರಾರಂಭಗೊಂಡು ಬೆಳೆಯುತ್ತ ಬಂದಿರುವ ಈ ಪ್ರಕಾರಕ್ಕೆ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಸುಮಾರು ೧೦೦೦ ಕೃತಿಗಳವರೆಗೆ ಸೇರ್ಪಡೆಯಾಗಿದೆ.

ಕನ್ನಡದಲ್ಲಿ ಮೊದಲು ಬಂದ ಜೀವನ ಚರಿತ್ರೆಗಳು ಮಹಾಪುರುಷರ ಜೀವನದ ಸಾಧನೆಗಳನ್ನು ತಿಳಿಸುವ, ದೇಶಾಭಿಮಾನ, ಉನ್ನತ ಧ್ಯೇಯಗಳನ್ನು ಬಿತ್ತುವ ಉದ್ದೇಶದಿಂದ ಬಂದವು.

೧. ಫರ್ಡಿನೆಂಡ್ ಕಿಟ್ಟೆಲ್ ರ – 'ಯೇಸುಕ್ರಿಸ್ತ'.

೨. ದೊಡ್ಡ ಬೆಲೆ ನಾರಾಯಣ ಶಾಸ್ತ್ರಿಗಳ – 'ಶಂಕರಾಚಾರ್ಯರ ಜೀವನ ಚರಿತ್ರೆ'.

೩. ರಾಜಪುರೋಹಿತರ – 'ಮಧ್ವಾಚಾರ್ಯರ ಚರಿತ್ರೆ'.

೪. ಎಂ.ಪಿ. ಪೂಜಾರರ – ' ಭಗವಾನ್ ಬುದ್ಧನ ಚರಿತ್ರೆ'

೫. ಎಂ.ಪಿ.ಪೂಜಾರರ – 'ಬಸವಚರಿತ್ರೆ'.

೬. ಎಂ.ಪಿ.ಪೂಜಾರರ – 'ಮಹಮ್ಮದ್ ಪೈಗಂಬರ್'

೭. ಬಿ. ಚಂದ್ರಶೇಖರಯ್ಯ,

ಸಿ.ಕೆ. ವೆಂಕಟರಾಮಯ್ಯ–'ಅಬ್ರಹಾಂ ಲಿಂಕನ್' ಹೊನ್ನಾಪುರ ಮಠರವರ.

೮. ರಾಮರಾಯರು, ರಜಿಯಾ ಬೇಗಂರ – 'ನೆಪೋಲಿಯನ್ ಬೋನಾಪಾರ್ಟ್'

– ಮೊದಲಾದ ಕೃತಿಗಳು ಗಮನಾರ್ಹ ಜೀವನ ಚರಿತ್ರೆಗಳು. ನಂತರದ ಅವಧಿಯಲ್ಲಿ ಜೀವನ ಚರಿತ್ರೆಗಳ ಆಯ್ಕೆಯಲ್ಲಿ ವೈವಿಧ್ಯ ಕಂಡು ಬಂತು. ದೇಶಭಕ್ತರು, ವಿಜ್ಞಾನಿಗಳು, ಕಲಾವಿದರು ಮುಂತಾದವರ ಜೀವನ ಚಿತ್ರಣವನ್ನು ಉತ್ತಮ ಸಾಹಿತಿಗಳು, ಕೈಗೊಂಡ ಕಾರಣ ಜೀವನಚರಿತ್ರೆಯ ಪ್ರಕಾರವೂ ಉತ್ತಮಾಂಶಗಳನ್ನು ಮೈಗೂಡಿಸಿಕೊಂಡು ಬೆಳೆಯಲು ಸಾಧ್ಯವಾಯಿತು. ಚ.ವಾಸುದೇವಯ್ಯ, ಎಂ.ಎಸ್. ಪುಟ್ಟಣ್ಣ, ಆಲೂರ ವೆಂಕಟರಾಯರು, ಮಾಸ್ತಿ ವೆಂಕಟೇಶ್ ಅಯ್ಯಾಂಗಾರ್, ಡಿ.ವಿ. ಗುಂಡಪ್ಪನವರು, ಎ.ಆರ್. ಕೃಷ್ಣಶಾಸ್ತ್ರಿ, ಟಿ.ಎಸ್. ವೆಂಕಣ್ಣಯ್ಯ, ಕುವೆಂಪು ಮೊದಲಾದ ಶ್ರೇಷ್ಠ ಬರಹಗಾರರು ಈ ಪ್ರಕಾರಕ್ಕೆ ತಮ್ಮ ಕೊಡುಗೆ ನೀಡಿದ್ದಾರೆ.

“ಆಧುನಿಕ ಕನ್ನಡ ಸಾಹಿತ್ಯದಲ್ಲಿ,

೧. ಎಂ.ಎಸ್. ಪುಟ್ಟಣ್ಣನವರ ‘ಕುಣಿಗಲ್ಲು ರಾಮಾಶಾಸ್ತ್ರಿಗಳ ಚರಿತ್ರೆ’.

೨. ಚ.ವಾಸುದೇವಯ್ಯನವರ – ‘ಆರ್ಯಕೀರ್ತಿ’

೩. ಬಿ.ಎಚ್. ಮುನಿಸ್ವಾಮಿರಾಯರ – ‘ರಾಜಯೋಗಿ ಚಿಕ್ಕಲಿಂಗಣ್ಣ ಸ್ವಾಮಿಗಳ ಜೀವನ ಚರಿತ್ರೆ’.

೪. ಡಿ.ವಿ. ಗುಂಡಪ್ಪನವರ – ‘ದಿವಾನ್ ರಂಗಾಚಾರ್ಲು’.

ಪ್ರಾರಂಭದಲ್ಲಿ ಬಂದ ಜೀವನ ಚರಿತ್ರೆಗಳೆಂದು ತೋರುತ್ತದೆ”.[೧] ಅನಂತರದ ವರ್ಷಗಳಲ್ಲಿ ಜೀವನ ಚರಿತ್ರೆ ಲೇಖಕರಿಗಂತೂ ಪ್ರಿಯವಾದ ಪ್ರಕಾರವಾಯಿತು.

“೧೯೦೧ ರಿಂದ ೧೯೧೪ ರ ವರೆಗೆ – ೧೭ ಜೀವನ ಚರಿತ್ರೆಗಳು

೧೯೧೫ ರಿಂದ ೧೫೩೪ ರ ವರೆಗೆ – ೨೭೦ ಜೀವನ ಚರಿತ್ರೆಗಳು

೧೯೩೫ ರಲ್ಲಿ ೧೦ ಜೀವನ ಚರಿತ್ರೆಗಳು

೧೯೩೬ ರಲ್ಲಿ ೧೭ ಜೀವನ ಚರಿತ್ರೆಗಳು ಪ್ರಕಟವಾದವು.

೧೯೪೩ ರಿಂದ ೧೯೭೨ ರವರೆಗೆ – ೬೧೨ ಜೀವನ ಚರಿತ್ರೆಗಳು ಪ್ರಕಟವಾದವು.

ಅದರಲ್ಲಿ ಧಾರ್ಮಿಕ ಪುರುಷರು: ೧೬೩, ರಾಷ್ಟ್ರಪುರುಷರು ೧೫೬, ವಿಜ್ಞಾನಿಗಳು ೨೮ ಸಾಹಿತಿಗಳು ಕಲಾವಿದರು : ೮೫, ಆತ್ಮ ಚರಿತ್ರೆಗಳು ೫೫ ವ್ಯಕ್ತಿಚಿತ್ರಗಳು: ೮೮ ಸಂಭಾವನಾ ಗ್ರಂಥಗಳು ೩೩ ಪ್ರಕಟವಾದವು.[೨]

ವ್ಯಕ್ತಿ ಚಿತ್ರಣ ಜೀವನ ಚರಿತ್ರೆಯ ಒಂದು ಒಳ ಪ್ರಕಾರ. ಕೃತಿಯ ನಾಯಕನ ಇಡೀ ಜೀವನವನ್ನು ಸಮೀಕ್ಷಿಸದೆ, ಅವನ ವ್ಯಕಿತ್ವದ ಸೊಗಸನ್ನೊ ಸತ್ವವನ್ನೊ ಸ್ಪಷ್ಟಗೊಳಿಸುವುದು ಇದರ ಉದ್ದೇಶ.

---

[೧] ಹೊಸಗನ್ನಡ ಸಾಹಿತ್ಯ ಚರಿತ್ರೆ – ಎಲ್. ಎಸ್. ಶೇಷಗಿರಿರಾವ್ ಪು.ಸಂ.–೨೩೩

[೨] ಕನ್ನಡ ಜೀವನ ಚರಿತ್ರೆ – ಎಂ.ವಿ. ಸೀತರಾಮಯ್ಯ

೧. ಎಂ.ಎಸ್. ಪುಟ್ಟಣ್ಣನವರ –'ಕುಣಿಗಲ್ ರಾಮಾಶಾಸ್ತ್ರಿಗಳ ಚರಿತ್ರೆ' (೧೯೧೦) ಮತ್ತು 'ಮಹಮ್ಮದ್ ಗವಾನ್' (೧೯೨೨).

೨. ಡಿ.ವಿ. ಗುಂಡಪ್ಪನವರ 'ಗೋಪಾಲಕೃಷ್ಣ ಗೋಖಲೆ' (೧೯೧೫) ಮತ್ತು 'ದಿವಾನ್ ಸಿ. ರಂಗಾಚಾರ್ಲು'.

೩. ವೆಂಕಟರಾಮಯ್ಯನವರ – 'ಹರ್ಷವರ್ಧನ', 'ಮಹಮ್ಮದ್ ಪೈಗಂಬರ್' ಮತ್ತು 'ಆಳಿದ ಮಹಾಸ್ವಾಮಿಯವರು',

೪. ಮಾಸ್ತಿಯವರ – 'ರವೀಂದ್ರನಾಥ ಠಾಕೂರರು'.

೫. ಕುವೆಂಪುರವರ–'ರಾಮಕೃಷ್ಣ ಪರಮಹಂಸ', 'ಸ್ವಾಮಿ ವಿವೇಕಾನಂದ'

ಮುಂತಾದವು ಉತ್ತಮ ಮಾದರಿಗಳು.

"ಎಂ.ಎಸ್. ಪುಟ್ಟಣ್ಣನವರ 'ಕುಣಿಗಲ್ ರಾಮಾಶಾಸ್ತ್ರಿಗಳ ಚರಿತ್ರೆ' ಕನ್ನಡದ ಮೊಟ್ಟ ಮೊದಲ ಜೀವನ ಚರಿತ್ರೆ, ಕಲ್ಪನಾತ್ಮಕ ನಿರೂಪಣೆ ಈ ಕೃತಿಯ ವೈಶಿಷ್ಟ್ಯ. ಈ ಜೀವನ ಚರಿತ್ರೆಯಲ್ಲಿ ಬರುವ ವ್ಯಕ್ತಿಗಳ ವ್ಯಕ್ತಿ ಚಿತ್ರಗಳು ಸ್ಪಷ್ಟವಾದ, ಜೀವಂತ ಮಾದಿರಗಳು. ದಿನಚರಿ ಮುಂತಾದ ಲಿಖಿತ ದಾಖಲೆಗಳು ಇಲ್ಲದಿದ್ದ ಸಂದರ್ಭದಲ್ಲಿ, ರಾಮಾಶಾಸ್ತ್ರಿಗಳ ಶಿಷ್ಯರು ಮತ್ತು ಅವರ ಅಪ್ರಕಟಿತ ಕಥೆಗಳ ಆಧಾರದ ಮೇಲೆ, ಕಲ್ಪನಾತ್ಮಕ ನಿರೂಪಣೆಯನ್ನು ಕೈಗೊಂಡಿರುವುದು ಈ ಕೃತಿಯ ವೈಶಿಷ್ಟ್ಯ"[೩] ಆದರೆ ಆಧುನಿಕರು ಕಲ್ಪನಾತ್ಮಕ ನಿರೂಪಣೆಯನ್ನು ನಿರಾಕರಿಸಿ ವಾಸ್ತವ ಚಿತ್ರಣಕ್ಕೆ ಮಹತ್ವ ನೀಡುತ್ತಾರೆ.

"ಡಿ.ವಿ.ಜಿ. ಯವರ 'ದಿವಾನ್ ರಂಗಾಚಾರ್ಲು' ಜೀವನ ಚರಿತ್ರೆಗಳ ರಚನೆಯಲ್ಲಿ ಒಂದು ಮಾದರಿ ಕೃತಿಯೆನಿಸಿದೆ. ಮೈಸೂರು ಸಂಸ್ಥಾನದ ಮೊದಲ ದಿವಾನರಾಗಿದ್ದ ರಂಗಾಚಾರ್ಲುರವರ ಜೀವನ ಚರಿತ್ರೆ ಅವರ ಆಡಳಿತ ಕಡತಗಳು,

---

[೩] ಕನ್ನಡ ಸಾಹಿತ್ಯ ಚರಿತ್ರೆ – ತ.ಸು. ಶಾಮರಾಯ ಪು.ಸಂ. ೨೪೪

ವೈಯಕ್ತಿಕ ಪತ್ರಗಳು ಮತ್ತು ಅವರ ಭಾಷಣಗಳನ್ನು ಆಧರಿಸಿದ ವಾಸ್ತವಿಕ ಅಧ್ಯಯನವಾಗಿದೆ"[೪]

ಅಭಿನಂದನ ಗ್ರಂಥಗಳು, ಸಂಭಾವನಾ ಗ್ರಂಥಗಳು, ವ್ಯಕ್ತಿ ಚಿತ್ರಗಳು ಮುಂತಾದ ಪ್ರವರ್ಗಗಳಿಗೆ ಸೇರಿದ ಗ್ರಂಥಗಳನ್ನು ಜೀವನ ಚರಿತ್ರೆಗಳ ಸಾಲಿನಲ್ಲಿಯೇ ಇರಿಸಬಹುದು. ಪಂಜೆ ಮಂಗೇಶರಾಯರ ನೆನಪಿಗಾಗಿ ಪಂಜೆ ಮಂಗೇಶರಾಯ 'ಶ್ರದ್ಧಾಂಜಲಿ' (ಮುಳಿಯ ತಿಮ್ಮಪ್ಪಯ್ಯ), 'ಅಭಿವಂದನೆ', (ಎ.ಆರ್. ಕೃಷ್ಣಶಾಸ್ತ್ರಿ) 'ಒಸಗೆ' (ಸೇಡಿಯಾಪು ಕೃಷ್ಣ ಭಟ್ಟ), 'ದೀವಿಗೆ' (ಗೋವಿಂದ ಪೈ) 'ಗಂಗೋತ್ರಿ' (ಕುವೆಂಪು), 'ಗೊರೂರು ಗೌರವ ಗ್ರಂಥ', (ಗೊರೂರು ರಾಮಸ್ವಾಮಿ ಅಯ್ಯಂಗಾರ್) 'ಸ್ವಸ್ತಿ' (ತ.ಸು.ಶಾಮರಾಯರು), 'ಸವಿನೆನಪು' (ಟಿ.ಎಸ್. ವೆಂಕಟಣ್ಣಯ್ಯ), 'ಅಂತಃಕರಣ' (ದೇಜಗೌ) 'ಚಂದನ' (ಕೆ.ಎಸ್. ನರಸಿಂಹಸ್ವಾಮಿ) 'ಕಾರಂತ ಪ್ರಪಂಚ' (ಶಿವರಾಮಕಾರಂತ) 'ಶ್ರೀನಿವಾಸ' (ಮಾಸ್ತಿ ವೆಂಕಟೇಶ್ ಅಯ್ಯಂಗಾರ್) 'ಸ್ನೇಹ ಕಾರ್ತಿಕ' (ಜಿ.ಎಸ್.ಶಿವರುದ್ರಪ್ಪ), 'ಮಾನ' (ಹಾ.ಮಾ.ನಾಯಕ).

ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರ 'ನೀಲಾಂಜನ'– ಇವೇ ಮೊದಲಾದ ಕೃತಿಗಳು ಆಯಾ ಮಹಾನ್ ವ್ಯಕ್ತಿಗಳ ಸಾಧನೆ ಸಿದ್ದಿಗಳನ್ನು, ವೈಶಿಷ್ಟ್ಯಗಳನ್ನು ಚಿತ್ರಿಸುತ್ತವೆ.

ಧಾರ್ಮಿಕ ನಾಯಕರನ್ನು ಕುರಿತಂತೆ ರಚಿತವಾದ ಉತ್ತಮ ಕೃತಿಗಳು.

೧. ರಾಜರತ್ನಂ ರವರ –'ಗೌತಮ ಬುದ್ಧ'

೨. ಮಿರ್ಜಿಅಣ್ಣಾರಾಯರ–'ಮಹಾವೀರನ ಜೀವನಚರಿತ್ರೆ'.

೩. ಸಿದ್ಧಯ್ಯ ಪುರಾಣಿಕರ–'ಶರಣಚರಿತಾಮೃತ'.

೪. ಡಾ.ಎಂ.ಚಿದಾನಂದಮೂರ್ತಿಯವರ–'ಬಸವಣ್ಣನವರು'

೫. ಎಂ.ಆರ್. ಶ್ರೀನಿವಾಸಮೂರ್ತಿಯವರ –'ಭಕ್ತಿ ಭಂಡಾರಿ'.

---

[೪] ಕನ್ನಡ ಸಾಹಿತ್ಯ ಚರಿತ್ರೆ – ತ.ಸು. ಶಾಮರಾಯ ಪು.ಸಂ. ೨೪೪

ಜೀವನಚರಿತ್ರೆಯ ಸಾಲಿಗೆ ಸೇರುವ ಗಮನರ್ಹಾ ಕೃತಿಗಳು ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ ಪ್ರಾತಿನಿಧಿಕ ಗ್ರಂಥ 'ಶ್ರೀ ಬಸವೇಶ್ವರರು', ಬಸವಣ್ಣನವರ ಸಾಧನೆ ಸಿದ್ಧಿಗಳ ಬಗ್ಗೆ, ಜೀವನ ಮೌಲ್ಯಗಳ ಬಗ್ಗೆ ಉತ್ತಮ ಲೇಖನಗಳನ್ನು ಒಳಗೊಂಡಿದೆ. ಕರ್ನಾಟಕ ವಿಶ್ವವಿದ್ಯಾನಿಲಯದವರು ಪ್ರಕಟಿಸಿರುವ 'ಬಸವಣ್ಣನವರ ವ್ಯಕ್ತಿತ್ವ ಹಾಗೂ ಜೀವನ ಸಿದ್ಧಿ' ಈ ಸಾಲಿನ ಮತ್ತೊಂದು ಉತ್ತಮ ಗ್ರಂಥ. ರಾಮಕೃಷ್ಣ ಪರಮಹಂಸ, ಯೇಸು ಕ್ರಿಸ್ತ, ಬುದ್ಧ, ಅರವಿಂದರ ಜೀವನ ಚರಿತ್ರೆಗಳೂ ಕನ್ನಡದಲ್ಲಿ ಬಂದಿವೆ. 'ರಾಮಕೃಷ್ಣ ಲೀಲಾ ಪ್ರಸಂಗ' ಬಂಗಾಳಿಯಿಂದ ಕನ್ನಡಕ್ಕೆ ಪ್ರಣವೇಶಾನಂದರ ಕೃತಿ ಬಂದಿದೆ. "ಪರಮಹಂಸ, ಶಾರದಾದೇವಿ, ವಿವೇಕಾನಂದರ ಜೀವನ ಚರಿತ್ರೆಗಳನ್ನು ಬರೆದಿರುವ ಸ್ವಾಮಿ ಸೋಮನಾಥಾನಂದ, ಕನ್ನಡ ಜೀವನ ಚರಿತ್ರೆಗಳ ಇತಿಹಾಸದಲ್ಲಿ ಕುವೆಂಪು ಬರೆದಿರುವ 'ಶ್ರೀ ರಾಮಕೃಷ್ಣ ಪರಮಹಂಸ' ಮತ್ತು 'ಸ್ವಾಮಿ ವಿವೇಕಾನಂದ' ವಿಶಿಷ್ಟ ಕೃತಿಗಳು ಭಾಷೆಯ ಬಳಕೆ ಮತ್ತು ವರ್ಣನೆಗಳ ಶ್ರೀಮಂತಿಕೆಯಿಂದಾಗಿ ಕಾವ್ಯಗುಣ ಪಡೆದಿರುವ ಈ ಕೃತಿಗಳು ಕಾದಂಬರಿಯ ಶ್ರೇಷ್ಠತೆಯನ್ನು ಸಾಧಿಸಿವೆ".[೫]

'ಸ್ವಾತಂತ್ರಯೋಧ ಶ್ರೀ ಅರವಿಂದ' ಅರವಿಂದ ಜೀವನ ಚಿತ್ರಣ ನೀಡುವ ಕೊ.ಚೆನ್ನಬಸಪ್ಪನವರ ಕೃತಿ.

ಪಂಪ, ರನ್ನ, ಕುಮಾರವ್ಯಾಸ, ಮುದ್ದಣ್ಣ ಮುಂತಾದವರ ಜೀವನ ಚರಿತ್ರೆಗಳು ಪ್ರಶಸ್ತ ಗ್ರಂಥಗಳ ಮೂಲಕ ಲಭ್ಯವಿದೆ.

ಮಳಿಯ ತಿಮ್ಮಪ್ಪಯ್ಯನವರ 'ನಾಡೋಜ ಪಂಪ' ಸಾಹಿತ್ಯ, ಚರಿತ್ರೆ, ಸಂಶೋಧನೆ ಈ ಎಲ್ಲದರ ಅಂಶಗಳನ್ನು ಒಳಗೊಂಡ ಉತ್ತಮ ಕೃತಿ ಮುಳಿಯ ತಿಮ್ಮಪ್ಪಯ್ಯನವರ 'ಪಾರ್ತಿಸುಬ್ಬ' ಕೂಡ ಗಮನಾರ್ಹ ಕೃತಿ.

---

[೫] ಕನ್ನಡ ಸಾಹಿತ್ಯ ಚರಿತ್ರೆ ತ.ಸು. ಶಾಮರಾಯ, ಪು.ಸಂ. ೨೪೫

ಅನಕೃಷ್ಣರಾಯರು ಬರೆದ 'ಕೈಲಾಸಂ', ತ.ರಾ.ಸುಬ್ಬಾರಾಯರು ಬರೆದ ಅ.ನ.ಕೃ, ವಿ.ಸೀತರಾಮಯ್ಯ ಬರೆದ 'ಶಿವರಾಮಕಾರಂತ', ಶಿವರಾಮಕಾರಂತರ 'ಕಲಾವಿದ ಕೃಷ್ಣ ಹೆಬ್ಬಾರರು, ತಿರುಮಲೆ ರಾಜಮ್ಮ ಬರೆದ 'ವೀಣೆಶೇಷಣ್ಣ', ದೇ.ಜವರೇಗೌಡರು ಬರೆದ 'ರಾಷ್ಟ್ರಕವಿ ಕುವೆಂಪು' ಮತ್ತು 'ತೀ.ನಂ.ಶ್ರೀ' ಕೃತಿಗಳು ಗಮನಾರ್ಹವಾದ ಜೀವನ ಚರಿತ್ರೆಗಳು.

ವಿಶ್ವ ಪ್ರಸಿದ್ಧ ವಿಜ್ಞಾನಿಗಳ ಜೀವನಚರಿತ್ರೆಗಳು ಸ್ವತಂತ್ರವಾಗಿಯೂ, ಅನುವಾದ ಕೃತಿಗಳಾಗಿಯೂ, ಕನ್ನಡದಲ್ಲಿ ಮೂಡಿ ಬಂದಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ, ಎನ್.ಕೆ. ನರಸಿಂಹಮೂರ್ತಿಯವರ 'ಮಹಾವಿಜ್ಞಾನಿಗಳು', ಗೌರೀಶಕಾಯ್ಕಿಣಿ ಮತ್ತು ಬಿ.ವಿ.ಸುಬ್ಬ ರಾಯಪ್ಪನವರು ಜಗದೀಶಚಂದ್ರ ಬೋಸರನ್ನು ಕುರಿತು ಬರೆದ ಎರಡು ಜೀವನ ಚರಿತ್ರೆಗಳು, ಬಿ.ಎಸ್.ರುಕ್ಕಮ್ಮನವರ 'ಮೇರಿ ಕ್ಯೂರಿ' ಮತ್ತು 'ಕೀಟಗಳ ಒಡನಾಡಿ ಫೇಬರ್', ಸೂ. ಸುಬ್ರಹ್ಮಣ್ಯಂ ಅವರ 'ಅಲೆಕ್ಸಾಂಡರ್ ಫ್ಲೆಮಿಂಗ್, ಎಚ್.ವಿ.ಶ್ರೀರಂಗರಾಜು ಅವರ 'ಆಲ್ಬರ್ಟ್ ಐನ್‌ಸ್ಟೈನ್', ಈ ಮೂಲಕ ಐಸ್ಯಾಕ್‌ನ್ಯೂಟನ್, ಥಾಮಸ್ ಆಲ್ವಎಡಿಸನ್, ಚಾರ್ಲ್ಸ್‌ಡಾರ್ವಿನ್, ಅಲೆಕ್ಸಾಂಡರ್ ಫ್ಲೆಮಿಂಗ್, ಲೂಯಿ ಪಾಸ್ತರ್, ಸಿ.ವಿ.ರಾಮನ್ ಹೆನ್ರಿಪೋರ್ಡ್, ಮೇರಿಕ್ಯೂರಿ, ಪಿ.ಸಿ.ರೇ. ಜೆ.ಸಿ.ಬೋಸ್, ಮುಂತಾದವರನ್ನು ಪರಿಚಯಿಸುವ ಕಾರ್ಯ ನಡೆದಿದೆ.

ಹಾಗೆಯೇ ಕಾರ್ಲ್ ಮಾರ್ಕ್ಸ್, ಮಾಕ್ಸಿಂಗಾರ್ಕಿ, ಲೆನಿನ್ ಸ್ಟಾಲಿನ್, ಮಾರ್ಟಿನ್ ಲೂಥರ್ ಕಿಂಗ್, ಅಬ್ರಹಾಂ ಲಿಂಕನ್ ಕೆನಡಿ, ಜಾನ್‌ಸ್ಟುವರ್ಟ್ ಮಿಲ್ ಮುಂತಾದ ಮಹಾನ್ ವ್ಯಕ್ತಿಗಳನ್ನು ಪರಿಚಯಿಸುವ ಕಾರ್ಯ ಜೀವನ ಚರಿತ್ರೆಗಳ ಮೂಲಕ ನಡೆದಿದೆ.

ರಾಷ್ಟ್ರೀಯ, ಅಂತರರಾಷ್ಟ್ರೀಯ ರಾಜಕಾರಣಿಗಳ ಜೀವನ ಚರಿತ್ರೆಗಳೂ ಕನ್ನಡದಲ್ಲಿ ದೊರಕುತ್ತವೆ. ಗಾಂಧಿಯನ್ನು ಕುರಿತ ಸಿದ್ಧವನಹಳ್ಳಿ ಕೃಷ್ಣಶರ್ಮರ 'ಪರ್ಣಕುಟಿ', ಪ್ರಬಂಧಗಳನ್ನು ಒಳಗೊಂಡ ಮಹತ್ವದ ಕೃತಿ. ಕಾ.ರಾ.ಸಾರಂಗ ರ– 'ರಾಜೇಂದ್ರಪ್ರಸಾದ್', ಮತ್ತೂರು ಕೃಷ್ಣಮೂರ್ತಿರವರ 'ಡಾ.ಜಾಕೀರ್ ಹುಸೇನ್', ಬಿ.ಅರ್. ಪ್ರಾಣೇಶರಾಯರ–'ಲಾಲ್‌ಬಹುದ್ದೂರ್ ಶಾಸ್ತ್ರಿ', ಕೆ.ಎಫ್ ಪಾಟೀಲರ' 'ಸಮಾಜವಾದಿ ಇಂದಿರಾಗಾಂಧಿ', ತಿ.ತಾ.ಶರ್ಮರ 'ಮೋಕ್ಷಗುಂಡಂ', ಮುಂತಾದವುಗಳನ್ನು ಹೆಸರಿಸಬಹುದು. ಮೈಸೂರಿನ ದಿವಾನರುಗಳ ಪರಿಚಯವನ್ನು ಡಿ.ವಿ.ಜಿ. ಅವರ 'ಮೈಸೂರಿನ ದಿವಾನರುಗಳು' ನಲ್ಲಿ ಕಾಣಬಹುದು.

ಶಿವರಾಮಕಾರಂತರ 'ಹುಚ್ಚು ಮನಸ್ಸಿನ ಹತ್ತು ಮುಖಗಳು', ಶ್ರೀರಂಗರ 'ಗಾಢನೆನಪುಗಳು', ಬೇಂದ್ರೆಯವರ 'ಚತುರ್ಮುಖ', ಆಲೂರ ವೆಂಕಟರಾಯರ 'ಜೀವನ ಸ್ಮರಣೆ', ಮಾಸ್ತಿಯವರ 'ಭಾವ'. ಅನ.ಕೃಷ್ಣರಾಯರ 'ಬರಹಗಾರನ ಬದುಕು', ದೇ.ಜವರೇಗೌಡರ 'ಹೋರಾಟದ ಬದುಕು', ಎಂ.ಎನ್. ಮೂರ್ತಿರಾಯರ 'ಸಂಜೆಗಣ್ಣಿನ ಹಿನ್ನೋಟ', ಮುಂತಾದ ಕೃತಿಗಳು ವ್ಯಕ್ತಿ ತನ್ನ ಬದುಕನ್ನು ಪ್ರಾಮಾಣಿಕವಾಗಿ ದಾಖಲಿಸುವ ಅರ್ಥೈಸುವ ಸೃಜನಾತ್ಮಕ ಕ್ರಿಯೆಯನ್ನು ಎತ್ತಿಹಿಡಿದಿವೆ.

ಉತ್ತಮ ವ್ಯಕ್ತಿ ಚಿತ್ರಗಳ ಮಾದರಿಗಳನ್ನು ಎಚ್ಚೆಸ್ಕೆಯವರ 'ಎತ್ತರದ ವ್ಯಕ್ತಿಗಳು' ಮತ್ತು 'ಬದುಕು ಬೆಳಕು', ದೇ.ಜವರೇಗೌಡರ 'ಸಾಹಿತಿಗಳ ಸಂಗದಲ್ಲಿ' ಬಿ.ವಿ.ವೈಕುಂಠರಾಜು ಅವರ 'ಸಪ್ತಶೃಂಗ', ಬಿ.ಜಿ.ಎಲ್.ಸ್ವಾಮಿಯವರ 'ಪಂಚಕಲಶಗೋಪುರ' ಮುಂತಾದ ಕೃತಿಗಳಲ್ಲಿ ಕಾಣಬಹುದು. ನಿಯತಕಾಲಿಕಗಳಲ್ಲಿ ಪ್ರಕಟವಾಗುವ ವ್ಯಕ್ತಿ ಚಿತ್ರಗಳು ಈ ಪ್ರಕಾರಕ್ಕೆ ಕೊಡುಗೆಗಳೆನಿಸಿವೆ.

ಅಭಿನಂದನ ಗ್ರಂಥಗಳು, ಸಂಭಾವನಾ ಗ್ರಂಥಗಳು ಮುಂತಾದ ಪ್ರವರ್ಗಗಳಿಗೆ ಸೇರಿದ ಗ್ರಂಥಗಳನ್ನು ಜೀವನ ಚರಿತ್ರೆಗಳ ಸಾಲಿನಲ್ಲಿಯೇ ಇರಿಸಬಹುದು.

ಎ.ಆರ್. ಕೃಷ್ಣಶಾಸ್ತ್ರಿಗಳ 'ಬಂಕಿಂಚಂದ್ರ', ದೇ.ಜವರೇಗೌಡರ, 'ಸಾಹಿತಿಗಳ ಸಂಗದಲ್ಲಿ', 'ತೀ.ನಂ.ಶ್ರೀ' 'ರಾಷ್ಟ್ರಕವಿ ಕುವೆಂಪು' ವಸುದೇವಾಚಾರ್ಯರ 'ನಾ ಕಂಡ ಕಲಾವಿದರು', ಪ್ರಭುಶಂಕರರ' 'ಖಲೀಲ್ ಗಿಬ್ರಾನ್', ಬಿ.ಶ್ರೀ ಪಾಂಡುರಂಗರಾಯರ 'ಗಮಕ ಭಗೀರಥರು', ಬಿ.ಜಿ.ಎಲ್.ಸ್ವಾಮಿಯವರ 'ಪಂಚಕಲಶಗೋಪುರ', ಡಿ.ವಿ.ಜಿ. ಅವರ ಜ್ಞಾಪಕ ಚಿತ್ರಶಾಲೆ, ಆತ್ಮಚರಿತ್ರೆಗಳಲ್ಲಿ ಶಿವರಾಮಕಾರಂತರ 'ಹುಚ್ಚು ಮನಸ್ಸಿನ ಹತ್ತು ಮುಖಗಳು', ಜೆ.ಪಿ.ರಾಜರತ್ನಂ ಅವರ 'ಹತ್ತು ವರ್ಷಗಳು' ನವರತ್ನ ರಾಮರಾಯರ 'ಕೆಲವು ನೆನಪುಗಳು', ಗುಬ್ಬಿವೀರಣ್ಣನವರ 'ಕಲೆಯೇ ಕಾಯಕ', ಶ್ರೀನಿವಾಸರ 'ಭಾವ', ದೇಜಗೌ ಅವರ 'ಹೋರಾಟದ ಬದುಕು' ಗಮನಿಸಬೇಕಾದ ಕೆಲವು ಪುಸ್ತಕಗಳು.

ಕುವೆಂಪು ಬರೆದಿರುವ 'ನೆನಪಿನ ದೋಣಿಯಲ್ಲಿ', 'ಶ್ರೀರಾಮಕೃಷ್ಣ ಪರಮಹಂಸ' ಮತ್ತು 'ಸ್ವಾಮಿ ವಿವೇಕಾನಂದ' ವಿಶಿಷ್ಟ ಕೃತಿಗಳು ಹಾಗೆಯೇ ಪೂರ್ಣಚಮದ್ರ ತೇಜಸ್ವಿ ಅವರ 'ಅಣ್ಣನ ನೆನಪು' ಕುವೆಂಪುರವರ ಮಗಳು ತಾರಿಣಿ ಚಿದಾನಂದ ಬರೆದ 'ಮಗಳು ಕಂಡ ಕುವೆಂಪು', ಪೂರ್ಣಚಂದ್ರ ತೇಜಸ್ವಿ ರವರ ಹೆಂಡತಿ ರಾಜೇಶ್ವರಿ ತೇಜಸ್ವಿ ಬರೆದ 'ನನ್ನ ತೇಜಸ್ವಿ' ಜೀವನ ಚರಿತ್ರೆಗಳು ಗಮನಾರ್ಹ ಕೃತಿಗಳಾಗಿವೆ.

**ಜೀವನ ಚರಿತ್ರೆಕಾರನ ಲಕ್ಷಣಗಳು :**

ಜೀವನ ಚರಿತ್ರೆ ಬರೆಯುವವನಿಗೆ ಸ್ಫುಟವಾದ, ಮೂರ್ತವಾದ ಶೈಲಿ ಇರಬೇಕು ಎಂಬುದು ಸ್ಪಷ್ಟವಾಗಿದೆ. ಜೊತೆಗೆ ಸಾಮಗ್ರಿಯನ್ನು ಹಲವು

ಮೂಲಗಳಿಂದ ಶಾಸನಗಳಿಂದ ಪ್ರಾರಂಭಿಸಿ ಸಮಕಾಲೀನರಿಗೆ ಬರೆದ ಪತ್ರಗಳು, ದಿನಚರಿಗಳವರೆಗೆ ಸಂಗ್ರಹಿಸಿ, ಅದಕ್ಕೆ ಬೆಲೆಕಟ್ಟುವ ಸಾಮರ್ಥ್ಯ ಮತ್ತು ತಾಳ್ಮೆ ಬೇಕು. ತನ್ನ ಕೃತಿಯ ನಾಯಕನನ್ನು ಅರ್ಥ ಮಾಡಿಕೊಳ್ಳುವ ಕಲ್ಪನಾಶಕ್ತಿಬೇಕು. ನಿರೂಪಣೆಯಲ್ಲಿ ಪ್ರಾಮಾಣಿಕತೆ ಬೇಕು.

ಒಬ್ಬ ವ್ಯಕ್ತಿಯನ್ನು ಕುರಿತು ಬರೆಯುವಾಗ ಭಾಷೆಯಲ್ಲಿ ಎಷ್ಟು ಲವಲವಿಕೆ, ಮೂರ್ತತೆ, ಸ್ಫುಟತ್ವ ಇರಬಹುದು, ಕೆಲವೇ ವಾಕ್ಯಗಳಲ್ಲಿ ಇಡೀ ವ್ಯಕಿತ್ವವನ್ನು ಹೇಗೆ ಸೆರೆಹಿಡಿಯಬಹುದು ಎಂಬುದಕ್ಕೆ ನಿದರ್ಶನವಾಗಿ, ಇಂದು ಜೀವನ ಚರಿತ್ರೆಯ ಪ್ರಕಾರದಲ್ಲಿ ಕನ್ನಡ ಗದ್ಯ ಎಂತಹ ಕಳೆಯನ್ನೂ, ಸ್ಫೂಟತ್ವವನ್ನೂ, ಪ್ರಸನ್ನತೆಯನ್ನೂ ಸಾಧಿಸಿದೆ ಎಂಬುದಕ್ಕೆ ನಿದರ್ಶನವಾಗಿ ಡಿ.ವಿ.ಜಿ. ಅವರ ತೇಜಸ್ವಿ ಅವರ ಕೆಲವು ವಾಕ್ಯಗಳನ್ನು ಗಮನಿಸಿ ಜೀವನ ಚರಿತ್ರೆಯ ಹಿನ್ನೆಲೆ ಅಧ್ಯಾಯವನ್ನು ಮುಗಿಸಬಹುದು.

**ಡಿ.ವಿ.ಗುಂಡಪ್ಪರ ವಾಕ್ಯ :**

"ಅವರು (ಡಾ. ಅಚ್ಚುತರಾಯರು) ಲೋಕವಿಷಯದಲ್ಲಿ ಜುಗುಪ್ಸೆ ಮಾಡಿ ಕೊಂಡವರಲ್ಲ, ತಾವು ಸದಾ ನಗುಮುಖದಿಂದಿದ್ದು ಲೋಕದಲ್ಲಿ ನಗುಮುಖ ಕಾಣಬೇಕೆಂದು ಆಶಿಸಿದ್ದವರು ಅವರು. ಹೂವನ್ನು ಕಂಡಾಗ ಅವರ ಕಣ್ಣು ಅರಳುತ್ತಿತ್ತು. ಅದು ಕೈಗೆ ಎಟುಕಿದಾಗ ಅದರ ಮಧುವಿಗೆ ಅವರ ತುಟಿಬಿರಿಯುತ್ತಿತ್ತು. ಹೀಗೆ ಎರಡು ಕೈಗಳಿಂದಲೂ ಜೀವನದ ಮಧುವನ್ನು ಸವಿದರು ಅವರು. ಲೋಕದ ಸ್ವಾರಸ್ಯಗಳನ್ನು ಹೀರುವುದರಲ್ಲಿ ಅವರು ಹುಸಿನಾಚಿಕೆಪಟ್ಟವರಲ್ಲ. ಈಶ್ವರನು ಒಂದು ಕಡೆ ನಾಲಿಗೆಯನ್ನೂ ಇನ್ನೊಂದು ಕಡೆ ಜೇನನ್ನೂ ಸೃಷ್ಟಿ ಮಾಡಿರುವುದು ಮನುಷ್ಯನು ಅವರೆಡನ್ನೂ ಜೊತೆಗೂಡಿಸಿಕೊಳ್ಳಬೇಕೆಂದೇ ಎಂದು ಅವರು ನಂಬಿದ್ದರು".

**ಪೂರ್ಣಚಂದ್ರ ತೇಜಸ್ವಿಯವರ ವಾಕ್ಯ :**

"ಕುವೆಂಪು ನಮ್ಮ ಕಾಲದ ಅತಿ ಸಂಕೀರ್ಣ ವ್ಯಕ್ತಿತ್ವದ ಪ್ರತಿಭೆ ಎಂದು ನಿರ್ವಿವಾದವಾಗಿ ಹೇಳಬಹುದು. ಅವರನ್ನು ಕವಿಯಾಗಿಯೋ, ಕಾದಂಬರಿಕಾರರನ್ನಾಗಿಯೋ, ತತ್ವ ಮೀಮಾಸಕರನ್ನಾಗಿಯೋ, ಪರಿಗಣಿಸಿದಾಗ ಅಥವಾ ಬಿಡಿಬಿಡಿಯಾಗಿ ಕಥೆ ಕಾವ್ಯಗಳನ್ನು ಅವಲೋಕಿಸಿದಾಗ ಸ್ಪಷ್ಟವಾಗಿ, ಸರಳವಾಗಿ ಕಾಣುವ ವ್ಯಕ್ತಿತ್ವ ಒಟ್ಟಂದದಲ್ಲಿ ನೋಡಿದ ಕೂಡಲೇ ಅತ್ಯಂತ ಸಂಕೀರ್ಣವಾಗಿ ಕಾಣುತ್ತದೆ. ಒಂದು ಕಡೆ ಇಂಗ್ಲೀಷ್ ಜ್ಞಾನ ಅತಿ ಮುಖ್ಯವೆಂದು ಶೂದ್ರರನ್ನೆಲ್ಲಾ ಎಚ್ಚರಿಸುತ್ತಾರೆ. ಕನ್ನಡದ ವಿಷಯಕ್ಕೆ ಬಂದಾಗ ಇಂಗ್ಲೀಷನ್ನು ಪೂತನಿ ಎಂದು ಕಟುವಾಗಿ ಟೀಕಿಸುತ್ತಾರೆ. ಭಾರತೀಯ ಸನಾತನ ಧರ್ಮದ ಅತ್ಯಂತ ಕಟುವಿಮರ್ಶೆ ಕುವೆಂಪುರವರಲ್ಲಿ ಕಾಣಬಹುದು. ಅಂತೆಯೆ ಉಪನಿಷದ್ ದರ್ಶನಗಳ ಆರಾಧನೆಯನ್ನೂ, ಅವರಲ್ಲಿ ಕಾಣಬಹುದು. ಅವರ ಜೀವನಾದ್ಯಂತ ಎಂದೂ ಯಾವ ದೇವಸ್ಥಾನಕ್ಕೂ ಕಾಲಿಡಲಿಲ್ಲ. ಆದರೆ ಅಷ್ಟೇ ಗಾಢವಾಗಿ ಧ್ಯಾನ, ತಪಸ್ಸೆ, ಪ್ರಾರ್ಥನೆಗಳನ್ನು ಪ್ರತಿಪಾದಿಸಿದರು. ಆದ್ದರಿಂದಲೇ ಅನೇಕ ವೇಳೆ ಸನಾತನಿಗಳು, ದೈವ ಭಕ್ತರು, ವಿಚಾರವಾದಿಗಳು, ನಾಸ್ತಿಕರು, ಎಲ್ಲರೂ ತಮ್ಮ ಪ್ರತಿಪಾದನೆಯನ್ನು ಕುವೆಂಪುರವರಲ್ಲಿ ಕಾಣುತ್ತಾ ಹೋದರು".[೬]

ಹೀಗೆ ಈ ಅಧ್ಯಾಯದಲ್ಲಿ ಹಲವು ಜೀವನ ಚರಿತ್ರೆಗಳು ಮತ್ತು ಜೀವನ ಚರಿತ್ರೆ ಬರೆದ ಲೇಖಕರು, ವ್ಯಕ್ತಿಗಳ ವಿಸ್ತೃತ ಪರಿಚಯವನ್ನು ಹಲವು ಮೂಲಗಳಿಂದ ಸಂಗ್ರಹಿಸಿ, ಸಂಶೋಧಿಸಿ ಉಲ್ಲೇಖಿಸಿದ್ದೇನೆ.

---

[೬] ಅಣ್ಣನ ನನೆಪು – ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಪು.ಸಂ. ೨

# ಅಧ್ಯಾಯ-೩

## ತೇಜಸ್ವಿ ಅವರ ಬದುಕು -ಬರಹ

## (ಕೆಲವು ಮುಖ್ಯ ಕೃತಿಗಳನ್ನು ಕುರಿತು ಪಕ್ಷಿನೋಟ)

# ಅಧ್ಯಾಯ-೩

## ತೇಜಸ್ವಿ ಅವರ ಬದುಕು -ಬರಹ
## (ಕೆಲವು ಮುಖ್ಯ ಕೃತಿಗಳನ್ನು ಕುರಿತು ಪಕ್ಷಿನೋಟ)

**ತೇಜಸ್ವಿ ಅವರ ಬದುಕು :**

ನಿಸರ್ಗದ ನಿಗೂಢಗಳ ಹುಡುಕಾಟದ ತಮ್ಮ ಕಥೆಗಳು, ಕಾದಂಬರಿಗಳು ಮತ್ತು ಗದ್ಯ ಕೃತಿಗಳಿಂದ ಬಹುಖ್ಯಾತರಾಗಿದ್ದ ತೇಜಸ್ವಿ ಅವರನ್ನು ಕುವೆಂಪು ಅವರ ಮಗ ಎಂದೇನೂ ಗುರುತಿಸಬೇಕಾದ ಅಗತ್ಯವಿಲ್ಲ ಕನ್ನಡದ ವಿಶಿಷ್ಟ ಸೊಗಡಿನ ಧ್ವನಿಪೂರ್ಣ ಸಾಹಿತಿ ಅಂದರಷ್ಟೇ ಸಾಕು ತಟ್ಟನೆ ತೇಜಸ್ವಿಯವರ ಚಿತ್ರ ಕಣ್ಮುಂದೆ ಬಂದು ನಿಲ್ಲುತ್ತದೆ.

ತೇಜಸ್ವಿಯವರು ೮-೯-೧೯೩೮ ರಂದು ಮಲೆನಾಡಿನ ಶಿವಮೊಗ್ಗ ಜಿಲ್ಲೆಯ ಕುಪ್ಪಳ್ಳಿಯಲ್ಲಿ ಜನಿಸಿದರು. ತಂದೆ ಕವಿ ಪುಟ್ಟಪ್ಪ, ತಾಯಿ ಹೇಮಾವತಿ ಇಂಟರ್ ಮೀಡಿಯೇಟ್ ವಿದ್ಯಾಭ್ಯಾಸವನ್ನು ಶಿವಮೊಗ್ಗದಲ್ಲಿ ಮುಗಿಸಿ, ಮೈಸೂರು ವಿಶ್ವವಿದ್ಯಾಲಯದಿಂದ ಎಂ.ಎ. ಪದವಿ ಪಡೆದರು.

ತೇಜಸ್ವಿ ಅವರು ಕೇವಲ ಕಾದಂಬರಿಕಾರರೋ, ಕತೆಗಾರರೋ ಅಲ್ಲ. ಅವರು ಅಪೂರ್ವ ಸಮರ್ಥ ಕ್ರಿಯಾಶೀಲ ಸಂಯೋಜಕ ಕಲಾವಿದರು ಅಂದರೆ ಚಿತ್ರಕಲೆ, ಛಾಯಾಗ್ರಹಣ, ಪರಿಸರ, ಸಂಗೀತ, ಸಾಮಾಜಿಕ ಬದುಕಿನ ಚಿಂತನೆ, ಭಾಷಾ ನೀತಿ, ಶಿಕ್ಷಣ, ವಿಜ್ಞಾನದ ನಿಗೂಢಗಳಿಗೆ ಕೈ ಹಚ್ಚಿ ಅನಂತ ವಿಸ್ತಾರಗಳನ್ನು ಶೋಧನಾತ್ಮಕ ಪ್ರತಿಭೆಯಿಂದ ತನ್ನದಾಗಿಸಿಕೊಂಡ ಅವರು ಕನ್ನಡ ಸಂಸ್ಕೃತಿಯಲ್ಲಿ ವಿಶಿಷ್ಟರು ಕಾರಂತರೇ ಹೇಳಿದಂತೆ, 'ತೇಜಸ್ವಿ ಕಾರಂತರ ಮುಂದುವರಿದ ಭಾಗ' ಹೃದಯಾಘಾತಕ್ಕೆ ಒಳಗಾದ ತೇಜಸ್ವಿ ೫-೪-೨೦೦೭ ರಲ್ಲಿ ನಿಧನರಾದರು.

**ತೇಜಸ್ವಿ ಅವರ ಬರಹ :**

ವಿದ್ಯಾರ್ಥಿ ದಿಸೆಯಿಂದಲೇ 'ಲಿಂಗಬಂದ' ಎಂಬ ಅತ್ಯುತ್ತಮ ಸಣ್ಣ ಕಥೆಯೊಂದನ್ನು ಬರೆಯುವುದರ ಮೂಲಕ ಕನ್ನಡ ಸಾಹಿತ್ಯ ಲೋಕ ಪ್ರವೇಶಿಸಿದ ತೇಜಸ್ವಿ, ಪ್ರತಿ ಬರವಣಿಗೆಯನ್ನು ವೈವಿಧ್ಯಮಯವಾಗಿ ಬರೆದಿದ್ದಾರೆ. ಕಥೆ, ಕಾದಂಬರಿ, ಕಾವ್ಯ, ವೈಚಾರಿಕ ಬರಹ, ವಿಮರ್ಶೆ ಅನುವಾದಿತ ಕೃತಿಗಳು ಮನೆಮಾತಾಗಿವೆ.

೧) ಕವನ ಸಂಗ್ರಹ– 'ಬೃಹನ್ನಳೆ ಸೋಮುವಿನ ಸ್ವಗತ ಲಹರಿ ಮತ್ತು ಇತರೆ ಕವನಗಳು'.

೨) ಕಥಾ ಸಂಗ್ರಹಗಳು: 'ಅಬಚೂರಿನ ಪೋಸ್ಟಾಫೀಸು', 'ಹುಲಿಯೂರಿನ ಸರಹದ್ದು', 'ಕಿರಗೂರಿನ ಗಯ್ಯಾಳಿಗಳು'.

೩) ನೀಳ್ಗತೆಗಳು : 'ಸ್ವರೂಪ' 'ನಿಗೂಢ ಮನುಷ್ಯರು', 'ಕೃಷ್ಣೇಗೌಡರ ಆನೆ', 'ಮಾಯಾಮೃಗ', 'ರಹಸ್ಯವಿಶ್ವ'.

೪) ಕಾದಂಬರಿಗಳು : 'ಕರ್ವಾಲೋ', 'ಚಿದಂಬರ ರಹಸ್ಯ', 'ಜುಗಾರಿಕ್ರಾಸ್', 'ಮಾಯಾಲೋಕ'.

೫) ನಾಟಕ : 'ಯಮಳ ಪ್ರಶ್ನೆ'.

೬) ಪರಿಸರ ಮತ್ತು ವೈಜ್ಞಾನಿಕ ಕೃತಿಗಳು : 'ಪರಿಸರದ ಕತೆಗಳು', 'ಕಾಡಿನ ಕತೆಗಳು',
'ಕನ್ನಡ ನಾಡಿನ ಹಕ್ಕಿಗಳು', 'ಮಿಸ್ಸಿಂಗ್ ಲಿಂಕ್', ಮತ್ತು 'ಮಿಲೇನಿಯಂ ಆವೃತ್ತಿಗಳು'.

೭) ವಿಮರ್ಶೆ : 'ವಿಮರ್ಶೆಯ ವಿಮರ್ಶೆ'

**ಪ್ರಶಸ್ತಿ-ಪುರಸ್ಕಾರಗಳು:**

೧) ೧೯೮೫ ರಲ್ಲಿ 'ಚಿದಂಬರ ರಹಸ್ಯ' ಕಾದಂಬರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ.

೨) ೧೯೮೭ ರಲ್ಲಿ 'ಚಿದಂಬರ ರಹಸ್ಯ' ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿತು.

೩) ೧೯೮೯ ರಲ್ಲಿ 'ಚಿದಂಬರ ರಹಸ್ಯ' ಕೃತಿಗೆ ಭಾರತೀಯ ಭಾಷಾ ಪರಿಷತ್ ಪ್ರಶಸ್ತಿ ಲಭ್ಯವಾಗಿದೆ.

೪) 'ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್' ಪ್ರವಾಸ ಕಥನಕ್ಕೆ ೧೯೯೧ ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ.

೫) 'ಕುಬಿ ಮತ್ತು ಇಯಾಲ' ಚಿತ್ರಕ್ಕೆ ೧೯೮೯-೯೦ ಸಾಲಿನ ಅತ್ಯುತ್ತಮ ಕನ್ನಡ ಚಲನಚಿತ್ರ ಪ್ರಶಸ್ತಿ ದೊರೆತಿದೆ.

೬) 'ಮಾಯಾಮೃಗ' ಕಥೆಗೆ ರಾಷ್ಟ್ರೀಯ ಕಥಾ ಪ್ರಶಸ್ತಿ ದೊರಕಿದೆ.

೭) 'ಅಬಚೂರಿನ ಪೋಸ್ಟಾಫೀಸು' ಚಿತ್ರಕ್ಕೆ ಅತ್ಯುತ್ತಮ ಪ್ರಾಂತೀಯ ಚಿತ್ರ ಪ್ರಶಸ್ತಿ ಲಭಿಸಿದೆ.

೮) 'ತಬರನ ಕಥೆ' ಚಿತ್ರಕ್ಕೆ ಸ್ವರ್ಣ ಕಮಲ ಪ್ರಶಸ್ತಿ ದೊರಕಿದೆ.

೯) ೨೦೦೧ ರಲ್ಲಿ ಸಮಗ್ರ ಸಾಹಿತ್ಯಕ್ಕೆ ಪಂಪ ಪ್ರಶಸ್ತಿ ಲಭಿಸಿತು.

**ತೇಜಸ್ವಿಯ ಕೆಲವು ಕೃತಿಗಳ ಕುರಿತು ಪಕ್ಷಿ ನೋಟ.**

೧) ಸ್ವರೂಪ (೧೯೬೨)

ನಲವತ್ತೆಂಟು ಪುಟಗಳ 'ಸ್ವರೂಪ' ನಾಯಕ ತನ್ನ ಜೀವನವನ್ನು ತಾನೇ ವಿಶ್ಲೇಷಿಸುವ ಪ್ರಕ್ರಿಯೆ ಬೆಂಬತ್ತಿರುವ ಮೌನದಿಂದ ಕೆಲವು ಕ್ಷಣಗಳಾದರೂ ಬಿಡುಗಡೆ ಪಡೆಯಲು ತನ್ನ ಗೆಳೆಯನ ಮುಂದೆ ತನ್ನ ಕಥೆ ಹೇಳುತ್ತಾನೆ ತಪ್ಪು ತರ್ಕದ ಜಾಡನ್ನು ಹಿಡಿದು ನಡೆದನೆಂದು ಗುರುತಿಸುವ ನಾಯಕ ತನ್ನ ಬಾಳು ಈಗ ಶೂನ್ಯಕ್ಕೆ ಬಲಿಯಾಗಿದೆ ಎಂದೂ ಗುರುತಿಸುತ್ತಾನೆ. ಆದರೆ ಅತಿಭಾವುಕತೆ, ಇತರರ ಅನುಕಂಪವನ್ನು ಆಹ್ವಾನಿಸು ಬಯಕೆ ಇಲ್ಲದೆ ತನ್ನ ಹೊಣೆಯನ್ನು ಅಬ್ಬರವಿಲ್ಲದೆ ಸ್ವೀಕರಿಸುತ್ತಾನೆ.

೨). ಅಬಚೂರಿನ ಪೋಸ್ಟಾಫೀಸು (೧೯೭೩)

ವಿಶಾಲವಾದ ಸಾಮಾಜಿಕ ದೃಷ್ಟಿಕೋನವನ್ನು ಅಳವಡಿಸಿಕೊಂಡು ಬರೆದ ಉತ್ಕೃಷ್ಟ ಕಥೆ ಇದು ಅಬಚೂರಿನ ಪೋಸ್ಟಾಫೀಸು ಸಂಗ್ರಹಕ್ಕೆ ಬರೆದ ಮುನ್ನುಡಿಯಲ್ಲಿ "ಲೋಹಿಯಾರವರ ತತ್ವಚಿಂತನೆ, ಕುವೆಂಪುರವರ ಕಲಾಸೃಷ್ಟಿ, ಕಾರಂತರ ಜೀವನದೃಷ್ಟಿ ಮತ್ತು ಬದುಕಿನ ಪ್ರಯೋಗಶೀಲತೆ, ಈ ಮೂರೇ ನನ್ನ ಈಚಿನ ಸಾಹಿತ್ಯ ರಚನೆಯ ಮೇಲೆ ಗಾಢ ಪರಿಣಾಮವನ್ನುಂಟು ಮಾಡಿರುವುವು. ಬಹುಶ: ಮುಂಬರುವ ಕಲಾವಿದರಿಗೆ ಕನ್ನಡ ಸಾಹಿತ್ಯ ಸೃಷ್ಟಿಯಲ್ಲಿ ಚೈತನ್ಯ ಶಕ್ತಿಯಾಗ ಬಲ್ಲಂಥವು ಈ ಮೂರೇ"[೭] ಎನ್ನುತ್ತಾರೆ.

ಇಲ್ಲಿ ತೇಜಸ್ವಿಯವರ ಮಾತೊಂದು ಉಲ್ಲೇಖಾರ್ಹವೆನಿಸುತ್ತದೆ. ನವ್ಯ ಸಾಹಿತ್ಯ ಬದಲಾಗುತ್ತಿರುವ ಪರಿಸರ ಹೊಸ ಜವಾಬ್ದಾರಿಗಳನ್ನು ಹೊರಲಾರದೆಂದು ಹೇಳುವ ತೇಜಸ್ವಿ ಅವರು "ಅದರ ಸಾಂಕೇತಿಕ ಶೈಲಿ ತಂತ್ರಗಳು, ಕೇವಲ ಉಪಧ್ಯಾಯರೇ,

---

[೭] ಅಬಚೂರಿನ ಪೋಸ್ಟಾಫೀಸ್ – ಕೆ.ಪಿ. ಪೂರ್ಣಚಂದ್ರ ತೇಜಸ್ವಿ – ಮುನ್ನುಡಿ

ಹೆಚ್ಚಾಗಿರುವ ಅದರ ಸಾಹಿತಿ ವರ್ಗ ಮತ್ತು ಕೇವಲ ಸಾಹಿತ್ಯದ ಮಟ್ಟಿಗೇ ಸೀಮಿತಗೊಂಡ ಅವರ ಕ್ರಾಂತಿಕಾರತನ".[೮] ಈ ಮೂರು ಕಾರಣಗಳನ್ನು ಗುರುತಿಸುತ್ತಾರೆ.

ಹಳ್ಳಿಯಲ್ಲಿ ಹೊಸದಾಗಿ ಪೋಸ್ಟಾಫೀಸ್ ತೆರೆಯುತ್ತಾರೆ. ಇದರಿಂದ ಹಳ್ಳಿಯ ಜೀವನದಲ್ಲೆ ಬದಲಾವಣೆಗಳಾಗುತ್ತವೆ. ಅಸಮಾಧಾನ, ಮನಸ್ತಾಪಗಳು, ಬೆಳೆಯುತ್ತವೆ. ನಾಗರೀಕತೆ ಕಾಲಿಟ್ಟಾಗ ಅಂತಹ ನಾಗರಿಕತೆಯಿಂದ ದೂರವಾದ ಸಮಾಜದಲ್ಲಿ ಆಗುವ ಗೊಂದಲವನ್ನು ಸೂಕ್ಷ್ಮವಾಗಿ ನಿರೂಪಿಸಿದ್ದಾರೆ.

**ಅವನತಿ (೧೯೭೪):**

ತೇಜಸ್ವಿ ಅವರ ಅತ್ಯಂತ ಶಕ್ತಿಶಾಲಿ ಸೃಷ್ಟಿ ಎಂದರೆ 'ಅವನತಿ' ಕಥೆ ಒಂದು ಸಮಾಜದ ವಾಸ್ತವಿಕತೆಯ ವರ್ತಮಾನದ ರೋಗಗ್ರಸ್ಥ ಮುಖವನ್ನು ಇದು ಚಿತ್ರಿಸುತ್ತದೆ. ಬದುಕಿನ ಅವಿಭಾಜ್ಯ ಅಂಗವಾದ ನಿರ್ದಿಷ್ಟ ಸಮಾಜವೊಂದರ ಭಿತ್ತಿಯೇ ಈ ಕಥೆಯ ಪ್ರಮುಖ ಆಶಯ. ಈ ಕಥೆಯ ವೈಶಿಷ್ಟ್ಯ ಮತ್ತು ತುಡಿತ ಸಮಕಾಲೀನ ಸಮಾಜ ಹಾಗೂ ಸಾಹಿತ್ಯದಲ್ಲಿಯೇ ಅನನ್ಯವಾದುದು. ಇಸ್ಲಾಪುರದ ಸೂರಚಾರಿಯ ದುರಂತ ಮತ್ತು ಇತ್ತಾವರದ ಸುಬ್ಬಯ್ಯನ ಹೆಂಡತಿ ಗೌರಿಯ ಅವನತಿಯೂ ಆ ಸಮಾಜದ ಅವನತಿಯೂ ಆಗಿದೆ.

ಗೌರಿಯ ಸೌಂದರ್ಯಕ್ಕೆ ಬರೆ ಇಡುವವರೆಗೆ ಹೋಗುವ ಕಣ್ಣುಗಳನ್ನು ಪಡೆದ ಸಮಾಜದ ಅವನತಿ ಒಂದು ಕಡೆ, ಬರೆ ಇಡುವ ಕ್ರಿಯೆಯವರೆಗೆ ಪತಿತನಾಗಿರುವ ಸೂರಚಾರಿಯ ಬದುಕಿನ ದುರಂತ ಮತ್ತೊಂದು ಕಡೆ ಇವರೆಡರ ನಡುವೆ ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಸಮಗ್ರವಾಗಿ ಕೊಳೆತು ಹೋಗಿರುವ ಹಳ್ಳಿಯ ಜನಜೀವನದ ಕ್ರಮ, ಕಲೆಗಾರಿಕೆ ನಶಿಸಿಹೋಗಿ ಅರ್ಥಪೂರ್ಣ ವಾದುದನ್ನು

---

[೮] ಅಬಚೂರಿನ ಪೋಸ್ಟಾಫೀಸ್ – ಕೆ.ಪಿ. ಪೂರ್ಣಚಂದ್ರ ತೇಜಸ್ವಿ – ಮುನ್ನುಡಿ

ಸೃಷ್ಟಿಸಲಾರದೆ ಒಟ್ಟು ಬದುಕಿನ ಕ್ಷಣಗಳನ್ನು ಕೊಲ್ಲುತ್ತಿರುವ ಅಸಹಾಯಕ ಮನುಷ್ಯನಾಗಿರುವ ಸೂರಾಚಾರಿ ಇವುಗಳ ಮೂಲಕ ಈ ಕಥೆಯ ಕಟ್ಟುವಿಕೆಯು ಸಾಧಿತವಾಗಿದೆ. ಬದುಕಿನ ಸಂತೋಷವನ್ನು ಕಳೆದುಕೊಂಡ ಸನ್ನಿವೇಶವು ತೀರಾ ಪರಿಚಿತವಾದ ವ್ಯಕ್ತಿಗಳ ಮೂಲಕ ಇಲ್ಲಿ ಧ್ವನಿತವಾಗಿದೆ.

ತೇಜಸ್ವಿ ಅವರ ಅತ್ಯಂತ ಪ್ರೀತಿ ಪಾತ್ರವಾದ ಪಾತ್ರಗಳು ಸ್ವಭಾವದಲ್ಲಿ ಅತ್ಯಂತ ಮುಗ್ಧರು ಸರಳರು ಇವರ ಬಗ್ಗೆ ಇರುವ ಪ್ರೀತಿ ಗಾಢವಾದುದು.

ಜಿ.ಎಚ್. ನಾಯಕರು ಹೇಳುವಂತೆ "ವ್ಯಕ್ತಿ ಮತ್ತು ಸಂಗತಿಗಳ ಬದುಕಿನ ಸಹಜಲಯದಲ್ಲಿ ಸಾಂಕೇತಿಕ ಅರ್ಥಛಾಯೆಗಳ ಅನುರಣನಗಳನ್ನು ಮೆಲುದನಿಯಲ್ಲಿ ನುಡಿಸುವಂತೆ ಇವೆ. ತೇಜಸ್ವಿಯವರ ನಿರೂಪಣೆಯ ಸಹಜಲಯಗತಿಯನ್ನು ಬದುಕಿನ ಸಹಜಲಯಗತಿಯೊಂದಿಗೆ ಒಡನಾಡಿಸುತ್ತಲೇ ಸಾಂಕೇತಿಕ ಅರ್ಥ ಛಾಯೆಗಳ ಅನುರಣನಗಳನ್ನು ಮೆಲುದನಿಯಲ್ಲಿ ನುಡಿಸುವ ರೀತಿಯ ಬರವಣಿಗೆಯ ಪ್ರಯೋಗಗಳನ್ನು 'ಅವನತಿ' ಕಥೆಯಲ್ಲಿ ಅತ್ಯಂತ ಯಶಸ್ವಿಯಾಗಿ ನಡೆಸಿದ್ದಾರೆ".

**ಕರ್ವಾಲೋ (೧೯೮೦)**

'ಕರ್ವಾಲೋ' ಬದುಕಿನ ವಿಸ್ಮಯವನ್ನು ಕುರಿತ ಕಾದಂಬರಿಯಾಗಿದೆ. ಇಲ್ಲಿ ಒಂದು ಅಂಶವನ್ನು ಮುಖ್ಯವಾಗಿ ಗಮನಿಸಬಹುದು. ಮುಗ್ಧತೆ ಮತ್ತು ಅವಜ್ಞೆಗಳ ನಡುವಣ ವ್ಯತ್ಯಾಸವನ್ನು ಗುರುತಿಸುವಾಗ ಮನುಷ್ಯನನ್ನು ಅವನ ಪರಿಸರದಿಂದ ಬೇರ್ಪಡಿಸಿ ನೋಡಲು ಸಾಧ್ಯವಿಲ್ಲ. ಪ್ರತಿಯೊಬ್ಬ ವ್ಯಕ್ತಿಗೂ 'ವೈಯಕ್ತಿಕ' ಎನ್ನಬಹುದಾದ ಗುಣಾವಗುಣಗಳಿರಬಹುದಾದರೂ ತನ್ನ ವರ್ಗದ ಗುಣಾವಗುಣಗಳ, ಮಿತಿ ಸಾಮರ್ಥ್ಯಗಳ ಒಟ್ಟಾರೆ ಸಮುದಾಯದ ಅನುಭವಗಳ ಹಿನ್ನಲೆಯಲ್ಲಿಯೇ ಆತನ ಬದುಕು ರೂಪಗೊಳ್ಳುವುದರಿಂದ ವರ್ಗ–ವರ್ಗಗಳ ನಡುವಣ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮತ್ತು ಬೌದ್ಧಿಕ ಅಂತರಗಳು ಅವುಗಳ

ಪರಸ್ಪರ ನಿಗೂಢತೆಗೆ ಕಾರಣವಾಗಿರುತ್ತವೆ. ಹೀಗಾಗಿ ಒಂದು ನಿರ್ದಿಷ್ಟ ಸಂದರ್ಭದಲ್ಲಿ ಒಬ್ಬನಿಗೆ ಮುಖ್ಯವಾಗಿ ಕಾಣುವುದು ಮತ್ತೊಬ್ಬನಿಗೆ ಅಸಾಮಾನ್ಯ ಎನಿಸಬಹುದು. ಈ ವೈದೃಶ್ಯಗಳೇ ಒಟ್ಟು ಬದುಕಿನ ಸಂದರ್ಭದಲ್ಲಿ ವಿಸ್ಮಯವನ್ನುಂಟು ಮಾಡುತ್ತವೆ.

"ಕರ್ವಾಲೋ" ದ ಮುಂದಣ್ಣ ಕರ್ವಾಲೋ ಗುರುತಿಸಿರುವಂತೆ ಅದ್ಭುತ ಪ್ರಕೃತಿ ಶಾಸ್ತ್ರಜ್ಞ ಅವನು ಹಾರುವ ಓತಿಕಂಡಿದ್ದರೂ, ಅದು ಇಡೀ ಜಗತ್ತೇ ಬೆಚ್ಚಿ ಬೀಳುವಂಥ, ಇಡೀ ಪ್ರಪಂಚಕ್ಕೆ ದಿಗ್ಭ್ರಮೆ ಹಿಡಿಸುವಂಥ ಸುದ್ದಿಯಾಗುತ್ತದೆ ಎಂಬ ಅರಿವೇ ಅವನಿಗೆ ಇರುವುದಿಲ್ಲ. ಅವನಿಗೆ ಸಾಮಾಜಿಕ ಪರಿಸರದಲ್ಲಿ ಅವನ ಪ್ರಕೃತಿ ಜ್ಞಾನಕ್ಕೆ ಬೆಲೆ ಕೊಡುವಂತವರು ಯಾರೂ ಇಲ್ಲ. ಅವನು ತಂದೆ ಸತ್ತಮೇಲೆ ಹುಟ್ಟಿದ ಮನುಷ್ಯ ಹುಳಹುಪ್ಪಟೆ ಎಂದುಕೊಂಡು ಕಾಡುಮೇಡು ಅಲೆದು ಕೊಂಡಿರುವ ಕೆಲಸಕ್ಕೆ ಬಾರದ ಬೇಜವಾಬ್ದಾರಿ ಮನುಷ್ಯ, ಎಂಬುದು ಅವನ ಸುತ್ತಮುತ್ತಲಿನ ಜನರ ತೀರ್ಮಾನ ಕಾದಂಬರಿಯ ಮೊದಲಿನಿಂದ ಕೊನೆಯವರೆಗೂ ಅವನ ಪರಿಸರದವರ ದೃಷ್ಟಿಯಲ್ಲಿ ಅವನೇನೂ ಬೇರೆಯಾಗಿ ಕಾಣಿಸುವುದಿಲ್ಲ ಮಂದಣ್ಣನ ಪ್ರತಿಭೆ, ಜ್ಞಾನಗಳನ್ನು ಗುರುತಿಸಿ, ಸರಿಯಾದ ರೀತಿಯಲ್ಲಿ ಅದನ್ನು ಬಳಸುವ ಕರ್ವಾಲೋನಂಥವನೊಬ್ಬ ದೊರೆತಾಗ ಮಂದಣ್ಣನಂಥ 'ಯ: ಕಶ್ಚಿತ್ ಬೇಜವಾಬ್ದಾರಿ ಮನುಷ್ಯ' ನೆಂಬಂತೆ ಇರುವವನೂ ಎಂಥ ಅದ್ಭುತ ವ್ಯಕ್ತಿಯಾಗಿ ಕಂಡಾನು ಎನ್ನುವುದನ್ನು 'ಕರ್ವಾಲೋ' ಕಾದಂಬರಿಯಲ್ಲಿ ಕಾಣಿಸಲಾಗಿದೆ.

**ಚಿದಂಬರ ರಹಸ್ಯ : (೧೯೮೫)**

'ಚಿದಂಬರ'ವೆಂದರೆ ಆಕಾಶ ಮತ್ತು ಮನಸ್ಸು ಎಂದೂ ಅರ್ಥವಿದೆ. ಇಲ್ಲಿಯ ಸಮಸ್ಯೆ ಆಕಾಶ ಮತ್ತು ಮನಸ್ಸಿನಷ್ಟೇ ರಹಸ್ಯವಾದುದು. ಅವುಗಳನ್ನು ಅರ್ಥೈಸುವುದು ತುಂಬಾ ಕಷ್ಟ ಈ ಕಾದಂಬರಿಯಲ್ಲಿನ ಪರಿಸರ ಸಹ ಆದೇ ಮಲೆನಾಡಿನ ಕೆಸರೂರು ಎಂಬ ಗ್ರಾಮದಲ್ಲಿ ಘಟಿಸುವ ಸಂಗತಿಗಳಿಗೆ ಸಂಬಂಧಿಸಿದ್ದು ಹಾಗಾಗಿ ಇದರ ರಚನಾ ವಿನ್ಯಾಸ ರೂಪಕ ಪ್ರಧಾನವಾಗಿದೆ. ಈ ಕೆಸರೂರು ಕ್ಷುದ್ರತೆಗೆ ಸಂಕೇತವಾದ ಯಾವುದೇ ಊರಾಗಬಹುದು. ಈ ಕ್ಷುದ್ರತೆಯ ಹಿಂದಿರುವ ಸತ್ಯವನ್ನು ಹುಡುಕುವುದು ಮತ್ತು ಅದನ್ನು ಓದುಗರಿಗೆ ಕಾಣಿಸುವುದು ಈ ಕಾದಂಬರಿಯ ಮುಖ್ಯ ಆಶಯವಾಗಿದೆ. ಈ ನಗ್ನ ಸತ್ಯ ಹುಡುಕುವ ಅನ್ವೇಷಣೆಯಲ್ಲಿ ವ್ಯಕ್ತಿಗಳು, ಪರಿಸರ, ಜಾತಿ, ರಾಜಕಾರಣ, ಧರ್ಮ, ದ್ವೇಷ, ವೈಷಮ್ಯ ಎಲ್ಲವೂ ತೊಡಗುತ್ತವೆ. ಕೆಸರೂರಿನ ಏಲಕ್ಕಿಗೆ ಹಾಗೆಯೇ ಸಂಸ್ಕೃತಿಗೆ ವೈರಸ್ ತಗುಲಿದೆ. ಕೆಸರೂರಿನ ಹೈಬ್ರಿಡ್ ಏಲಕ್ಕಿ ಬಗ್ಗೆ ಸಂಶೋಧನೆ ಮಾಡುತ್ತಿದ್ದ ಜೋಗಿಹಾಳರ ಕೊಲೆಯಾಗುತ್ತದೆ. ಅವರ ಕೊಲೆಯನ್ನು ಪತ್ತೆ ಹಚ್ಚಲು ದೆಹಲಿಯ ಏಲಕ್ಕಿ ಬೋರ್ಡಿನ ಇಂಟಲಿಜೆನ್ಸ್ ಆಫೀಸರ್ ಆದ ಶಾಮಾನಂದ ಅಂಗಾಡಿ ಬರುತ್ತಾನೆ. ಆತನ ಪತ್ತೆದಾರಿಯ ಕಥೆಯಾಗಿ ಇದು ಆರಂಭವಾಗುತ್ತದೆ.

ಕೆಸರೂರಿನ ಬದುಕು ಅತ್ಯಂತ ಜಟಿಲವೂ, ರಹಸ್ಯಾತ್ಮಕವೂ ಆದ ವೈರುದ್ಯಗಳಿಂದ ಕೂಡಿದೆ. ಊರಿನ ರಾಜಕಾರಣಕ್ಕೂ, ಏಲಕ್ಕಿ ಸಂಶೋಧನಾ ಕೇಂದ್ರಕ್ಕೂ, ಪರಸರ ನಾಶಕ್ಕೂ ಶೋಷಣೆ ದೌರ್ಜನ್ಯಗಳಿಗೂ ಪರಸ್ಪರ ಸಂಬಂಧವಿದೆ. ಕೊನೆಗೆ ಅಂಗಾಡಿ ಬರಿಕೈಯಲ್ಲಿ ದೆಹಲಿಗೆ ಹಿಂದಿರುಗಬೇಕಾಗುತ್ತದೆ. ಈ ನಡುವೆ ಕೃಷ್ಣೇಗೌಡನ ಮಗಳು ಜಯಂತಿ ಮತ್ತು ತಬ್ಬಲಿ ರಶೀದನ ಜೊತೆ ಘಟಿಸುವ ಪ್ರೇಮ, ಜಾತಿವಿನಾಶ ದತ್ತ ದಾಪುಗಾಲು ಹಾಕುವುದು . ಇವೆಲ್ಲಾ ಕಾದಂಬರಿಯನ್ನು ಮತ್ತೊಂದು ನೆಲೆಗೆ ಕರೆದೊಯ್ಯುತ್ತದೆ. ಕೊನೆಗೆ ಊರಿಗೆ ಸುಲೆಮಾನ್ ಕಡೆಯವರಿಂದ

ಬೆಂಕಿ ಬೀಳುತ್ತದೆ. ಅಬಾರಿ ಹೊಲಗೇರಿಗೆ ಬೆಂಕಿ ಹಚ್ಚುತ್ತಾನೆ. ಇಡೀ ಕಾಡಿಗೆ ಬೆಂಕಿಯನ್ನು ಸುಲೆಮಾನ್ ಹಚ್ಚಿಸುತ್ತಾನೆ. ಈತ ಕೃಷ್ಣೇಗೌಡನಿಗೆ ಪ್ರತಿಸ್ಪರ್ಧಿ. ಇವರಿಬ್ಬರೂ ರಾಜಕಾರಣದಲ್ಲಿ ಮಹತ್ವಾಕಾಂಕ್ಷಿಗಳು. ಈ ಇಬ್ಬರ ಆಕಾಂಕ್ಷೆಯೇ ಇಡೀ ಕೆಸರೂರನ್ನು ಬಲಿತೆಗೆದು ಕೊಳ್ಳುತ್ತದೆ. ಜಯಂತಿ ಮತ್ತು ರಶೀದ ಇಬ್ಬರೂ ಆ ಬೆಂಕಿಯ ವ್ಯೂಹದಿಂದ ಪಾರಾಗುತ್ತಾರೆ. ಇಡೀ ಊರು ಸ್ಮಶಾನವಾಗುತ್ತದೆ. ಆ ಸ್ಮಶಾನದಿಂದ ಈ ಜೋಡಿಯ ಚೈತನ್ಯ ಚಿಮ್ಮುತ್ತದೆ.

**ಜುಗಾರಿ ಕ್ರಾಸ್ ೧೯೯೪ :**

ತೇಜಸ್ವಿಯವರು ತಮ್ಮ ಸೃಜನಶೀಲ ಸಾಹಿತ್ಯದ ಕುತೂಹಲ, ಹಾಸ್ಯ ಸಾಹಿತ್ಯದ ವಿನೋದ ಶೈಲಿ ಹಾಗೂ ನೇರ ಅನುಭವ ಕಥನದ ಸರಳತೆ ಮತ್ತು ಸಮಗ್ರತೆ ಇವುಗಳನ್ನು ಈ ಕೃತಿಯಲ್ಲಿ ಸಮರ್ಥವಾಗಿ ದುಡಿಸಿಕೊಂಡಿದ್ದಾರೆ. ಹೀಗಾಗಿ ಈ ಕಾದಂಬರಿಯನ್ನು ಓದುವುದೇ ಒಂದು ಉಲ್ಲಾಸಕರ ಅನುಭವ ಮನುಷ್ಯ ಮತ್ತು ಸಮಾಜದ ಸಾಮಾಜಿಕ ಸಂಬಂಧಗಳ ಸತ್ಯಗಳನ್ನು ಅನ್ವೇಷಿಸುವ ಪ್ರಯತ್ನವನ್ನು ಈ ಕಾದಂಬರಿ ಮಾಡುತ್ತದೆ. ಈ ಕಾದಂಬರಿ ಏಲಕ್ಕಿ ವ್ಯಾಪಾರ ಕೇಂದ್ರಬಿಂದುವಾಗಿದೆ. ಅದರ ಹಿಂದೆ ಭಯ, ತಲ್ಲಣ ಅಡಗಿದೆ.

ಮೇಲು ನೋಟಕ್ಕೆ ಸುರೇಶ ಮತ್ತು ಗೌರಿ ದಂಪತಿಗಳ ಕಥೆ ಎಂಬಂತೆ ಕಂಡರೂ ಇದರೊಳಗೆ ಹುದುಗಿರುವ ಭೂಗತ ಜಗತ್ತು. ಕಾಳಸಂತೆಕೋರರ ಜಗತ್ತು ಭಯಾನಕತೆಯಿಂದ ಕೂಡಿದೆ. ಸುರೇಶ ಒಬ್ಬ ವಿಶ್ವ ವಿದ್ಯಾನಿಲಯದ ಸ್ನಾತಕೋತ್ತರ ಪದವೀಧರ ಆತನ ತಂದೆ ಅವನಿಗೆ ಹತ್ತು ಲಕ್ಷ ಕೊಟ್ಟು ನಿನ್ನ ಪಾಡು ನಿನಗೆ ಅಂದ ಮೇಲೆ ಆತ ಮಲಯದಿಂದ ಮಲೆನಾಡಿಗೆ ಬಂದು ಆ ಹಣದಲ್ಲಿ ಕುಡಿಯದೆ, ತಿನ್ನದೆ, ಜುಗಾರಿ ಸಹ ಆಡದೆ ಮೈಸೂರಿಗೆ ಕನ್ನಡ ಸಾಹಿತ್ಯ ಓದಲು ಬಂದವನು ಕೊನೆಗೆ ಕುಮರಿ ಹತ್ತಿರ ಏಲಕ್ಕಿ ಬೆಳೆಯಲು ನಿಲ್ಲುತ್ತಾನೆ. ಅವನಿಗೆ ಬೆಂಬಲವಾಗಿ ಅವನ ಹೆಂಡತಿ ಗೌರಿ ನಿಲ್ಲುತ್ತಾಳೆ. ಆಕೆಯೂ ವಿದ್ಯಾವಂತೆ ಸುಶಿಕ್ಷಿತೆ ಇಬ್ಬರೂ ಆ

ಪರಿಸರಕ್ಕೆ ಹೊರಗಿನಿಂದ ಬಂದವರು. ಆ ವರ್ಷ ಏಲಕ್ಕಿ ಚೆನ್ನಾಗಿ ಬಂದಿದೆ. ಅದಕ್ಕೆ ಒಳ್ಳೆರೇಟೂ ಬಂದಿದೆ. ಅದನ್ನು ಮಾರಲು ಇಬ್ಬರೂ ಜುಗಾರಿ ಕ್ರಾಸ್‌ನಿಮದ ದೇವಪುರಕ್ಕೆ ಹೊರಟಲ್ಲಿಂದ ಕಾದಂಬರಿ ಆರಂಭವಾಗುತ್ತದೆ. ಇಪ್ಪತ್ನಾಲ್ಕು ಗಂಟೆಯಲ್ಲಿ ನಡೆಯುವ ಕಥೆ ಇದು.

**ಕುಬಿ ಮತ್ತು ಇಯಾಲ (೧೯೭೩)**

ಈ ಕಥೆಯ ಕುಬಿಯ ಮೌಢ್ಯ ತುಂಬಿರುವ ಅವನ ಸಮಾಜದೊಂದಿಗೆ ಅರ್ಥಪೂರ್ಣವಾದ ಸಂವಹನ ಏರ್ಪಡದಂತಾಗಿ ಕುಬಿಯ ವಿಚಾರವಾದವು ವಿಫಲವಾಗುವ ದುರಂತವನ್ನು ಅಲ್ಲಿ ತೇಜಸ್ವಿಯವರು ಕಾಣಿಸಿದ್ದಾರೆ. ಈ ಕಥೆಯಲ್ಲಿ ಕುಬಿಯ ಸೋಲು ಒಂದು ವಿಷಾದದ ದನಿಯನ್ನು ಹುಟ್ಟಿಸುವಂತಿದ್ದರೂ ಕಥೆಯ ತೀರ್ಮಾನ ಪರೋಕ್ಷವಾಗಿ ವಸ್ತುಸ್ಥಿತಿವಾದವನ್ನು ಪ್ರತಿಪಾದಿಸುವಂತಿದೆ. ಅಂದರೆ ಭೈರಾಪುರದ ಜನರ ಮೂಢನಂಬಿಕೆ ಕುಬಿಯಂಥವನ ವಿಚಾರ ವಾದದಿಂದ ಬದಲಾಗಂಥದು, ಅದು ಶಾಶ್ವತವಾಗಿ ಮುಂದುವರಿಯುವಂಥದು ಎಂಬುದನ್ನು ಕಥೆ ತಿಳಿಸುವುದರ ಜೊತೆಗೆ ಪರಿಸರದಲ್ಲಿ ವಿಚಾರವಾದದ ಅಸಹಾಯಕತೆಯನ್ನು ತಿಳಿಸುತ್ತದೆ.

"ಕುಬಿ ಡಾಕ್ಟರು ಸತ್ತಲೋರಿಯ ಹೆಣದ ಮೇಲೆ ಅವನ ಪ್ರೇತವನ್ನು ಆವಹನೆ ಮಾಡಿ ಈ ಎಲ್ಲ ಸತ್ಯಗಳನ್ನು ಕೇಳಿ ತಿಳಿದರು. ಮಹಾ ಸತ್ಯನಿಷ್ಠ ಕುಬಿ ಡಾಕ್ಟರು ಎಂದರೆ ದೈಯ್ಯ ಪ್ರೇತ ಪಿಶಾಚಿಗಳೂ ತಗ್ಗಿ ನಡೆಯುತ್ತವೆ".

"ಹೀಗೆಲ್ಲಾ ಅವಲೋಚಿಸಿ ಜನ ಧೂಪದ ಮರದ ಬಂಡೆಯನ್ನೂ ಕುಬಿ ಡಾಕ್ಟರನ್ನೂ ಕೊಂಡಾಡತೊಡಗಿದರು. ಕುಬಿ ತಾನು ಯಾವುದನ್ನು ನಂಬದೆ

ವಿರೋಧಿಸಿ ತಿರಸ್ಕರಿಸಿದ್ದನೋ ಅದನ್ನೇ ಗೂಢವಾಗಿ ಇನ್ನೊಂದು ಕಡೆಯಿಂದ ಪ್ರತಿಪಾದಿಸುತ್ತಲೂ ಬಂದುದು ಕಾಲ ಪುರುಷನ ಅಪಹಾಸ್ಯ ಇತಿಹಾಸದ ವ್ಯಂಗ್ಯ”[೯]

ಧೂಪದ ಮರದ ಬಂಡೆ ಆ ಊರಿನ ಜನರ ಮೂಢನಂಬಿಕೆಗೆ ಹಾಗೂ ಆ ಮೂಢನಂಬಿಕೆಯನ್ನು ಉಳಿಸಿಕೊಳ್ಳುವುದಕ್ಕೆ ಸಂಬಂಧಿಸಿದಂಥ ಆ ಜನರ ನಿಶ್ಚಯಕ್ಕೆ ಸಂಕೇತವೆಂಬಂತೆ ಈ ಕಥೆಯಲ್ಲಿ ಬೆಳೆದು ಬಂದಿದೆ.

**ನಿಗೂಢ ಮನುಷ್ಯರು : (೧೯೭೩)**

ಈ ಕೃತಿಯಲ್ಲಿ ಗೋಪಾಲಯ್ಯ, ಶಾರಿ, ಮರಸರ ವ್ಯಕ್ತಿಗಳನ್ನು ಮಾನವೀಯ ಅನನ್ಯತೆಯಾಗಿ ಗುರುತಿಸಿಕೊಂಡಿದ್ದಾರೆ. ಗೋಪಾಲಯ್ಯ, ರಂಗಪ್ಪ, ಜಗನ್ನಾಥ ಈ ಮೂರು ಪಾತ್ರಗಳ ಪ್ರಜೆಗಳಲ್ಲಿ ಪ್ರತ್ಯೇಕವಾಗಿ ದಾಖಲಾಗುವ ಅನುಭವಗಳು ಕೃತಿ ನಿರ್ಮಾಣಕ್ಕೆ ಕಾರಣವಾಗಿದೆ. ಈ ಮೂವರ ಸಂವೇದನೆಗಳು ಒಂದರೊಳಗೊಂದು ಸೇರಿಕೊಂಡು ಪ್ರಜ್ಞಾ ಕೇಂದ್ರವೊಂದನ್ನು ನಿರ್ಮಿಸಿದೆ. ಈ ಪ್ರಜ್ಞಾಕೇಂದ್ರವೂ ಪರಿಮಿತ ಅರ್ಥದಲ್ಲಿ ಮಾತ್ರ ಸರ್ವಸಾಕ್ಷಿತ್ವ ದೃಷ್ಟಿಯಾಗಿದೆ. ಮನುಷ್ಯನಿಗೆ ಸರ್ವ ಸಾಕ್ಷಿತ್ವ ದೃಷ್ಟಿ ಎಂಬುದೇ ಇಲ್ಲ ಎಂಬ ನಿಲುವನ್ನು ಈ ಕೃತಿ ಪ್ರತಿಪಾದಿಸುತ್ತದೆ.

ಈ ಅಧ್ಯಾಯದ ಮೂಲಕ ತೇಜಸ್ವಿ ಅವರ ಬದುಕು ಮತ್ತು ಬರಹದ ಸಂಕ್ಷಿಪ್ತ ವಿವರಣೆ ಮಾಡಿಕೊಡಲು ಪ್ರಯತ್ನಿಸಿದ್ದೇನೆ. ತೇಜಸ್ವಿ ಅವರು ಮೊದಲು ತಮ್ಮ ಬರವಣಿಗೆಯನ್ನು ನವ್ಯ ಸಾಹಿತ್ಯದ ಮೂಲಕ ಪ್ರಾರಂಭಿಸಿದರು. ತದ ನಂತರ ನವ್ಯ ಮಾರ್ಗವನ್ನು ಬಿಟ್ಟು ಸರಳ ಮಾರ್ಗವನ್ನು ಅನುಸರಿಸಿದರು. ಇದಕ್ಕೆ ಅವರು ಕೊಡವ ಸಮರ್ಥನೆ ಈ ರೀತಿಯಾಗಿದೆ. “ನಮ್ಮ ನವ್ಯ ಸಾಹಿತ್ಯ ಸಂಪ್ರದಾಯದ ಸಾಂಕೇತಿಕ ಮಾರ್ಗ, ಠಕ್ಕಿನ ಪ್ರೌಢವಿಮರ್ಶೆ ಇವೆಲ್ಲಾ ಈ ಅವ್ಯಕ್ತ ಭಾರತದ ಎದುರು

---

[೯] ಅಬಚೂರಿನ ಪೋಸ್ಟಾಫೀಸ್ – ಕೆ.ಪಿ. ಪೂರ್ಣಚಂದ್ರ ತೇಜಸ್ವಿ – ಪು. ಸಂ. ೬೬

ಅಸಂಬದ್ಧವಾಗಿ ಹೋದುವು. ಆದರೆ ಇದರೊಡನೆಯೇ ಲೋಹಿಯಾರವರ ಕಾಣ್ಕೆ, ತತ್ವ ಚಿಂತನೆಗಳು ಮತ್ತು ಹಳ್ಳಿಯ ಜೀವನದ ಹೊಸ ಪರಿಸ್ಥಿತಿಗಳು ನನಗೆ ಇನ್ನೊಂದು ಬಗೆಯ ಶ್ರದ್ಧೆಯನ್ನು ತಂದಿತ್ತವು"[೧೦].

"ನಾನು ಓದಿದ್ದಕ್ಕೆ ಯಾವ ರೀತಿಯಲ್ಲೂ ಸಂಬಂಧವಿಲ್ಲದ ಯಾವುಯಾವುದೋ ಕ್ಷೇತ್ರಗಳಲ್ಲಿ ತೊಡಗಿಕೊಂಡೊಡನೆ ಇಡೀ ನವ್ಯ ಮಾರ್ಗದ ದೃಷ್ಟಿ, ಧೋರಣೆ ಮತ್ತು ಅದರ ಬೌದ್ಧಿಕ ಸಿದ್ಧತೆಗಳು ಕ್ಷುಲ್ಲಕವಾಗಿಯೂ ಹಾಸ್ಯಾಸ್ಪದವಾಗಿಯೂ ಕಾಣತೊಡಗಿದವು ಅಷ್ಟೇ ಅಲ್ಲ, ನವ್ಯ, ಪ್ರಗತಿ ಶೀಲ, ನವೋದಯ, ಬಂಡಾಯ ಮುಂತಾದ ವರ್ಗೀಕರಣವೇ ಅಸಂಬದ್ಧವಾಗಿ ಕಾಣಿಸಿತು. ಇಂಗ್ಲೀಷ್ ಸಾಹಿತ್ಯದ ಅನುಕರಣೆಗಳಾಗಿ ಕನ್ನಡ ಸಾಹಿತ್ಯದ ಈ ಎಲ್ಲ ಚಳುವಳಿಗಳೂ ಇರುವುದನ್ನು ನೀವು ಕಾಣಬಹುದು. ನವೋದಯ ಮತ್ತು ಪ್ರಗತಿ ಶೀಲ ಚಳವಳಿಯಲ್ಲಿ ಅವು ಅನುಕರಣೆಗಳಾದರೂ ಅದಕ್ಕೆ ಸಂವಾದಿಯಾದ ಸಾಮಾಜಿಕ ಸ್ಥಿತ್ಯಂತರಗಳು ಭಾರತೀಯ ಪರಿಸರದಲ್ಲಿದ್ದವು. ಆದರೆ ನವ್ಯ ಚಳವಳಿಯಂತೂ ಅದರ ತಾತ್ವಿಕತೆಯಲ್ಲಿ ಇಂಗ್ಲೀಷ್ ಸಾಹಿತ್ಯದ ಕೆಟ್ಟ ನಕಲಿಯಂತೆ ನನಗೆ ಕಂಡಿತು".[೧೧]

ಈ ಅಭಿಪ್ರಾಯಗಳ ಮೂಲಕ ನವ್ಯ ಮಾರ್ಗಕ್ಕೆ ತಿಲಾಂಜಲಿ ಹಾಡಿ ಸರಳತೆಯ ಮೂಲಕ ಮಾಡಿದ ಸಾಹಿತ್ಯ ಕೃಷಿ ಸಹಸ್ರಾರು ಓದುಗರ ಮೆಚ್ಚುಗೆಗಳಿಸುವಲ್ಲಿ ಯಶಸ್ವಿಯಾಗಿವೆ.

---

[೧೦] ಅಬಚೂರಿನ ಪೋಸ್ಟಾಫೀಸ್ – ಕೆ.ಪಿ. ಪೂರ್ಣಚಂದ್ರ ತೇಜಸ್ವಿ – ಮುನ್ನುಡಿ

[೧೧] ತೇಜಸ್ವಿ ನೆನಪು – ಸಂಪಾದಕರು ಬಿ. ಚಂದ್ರೇಗೌಡ, ಬಿ.ಎಲ್. ರಾಜು ಪು.ಸಂ. ೧೫೭

# ಅಧ್ಯಾಯ-೪

## ತೇಜಸ್ವಿಯವರ ಸೃಜನಶೀಲ ನೆಲೆಗಳು

ರಾಜೇಶ್ವರಿ ಮತ್ತು ತೇಜಸ್ವಿ ಅವರ ಮೊದಲ ಭೇಟಿ ಅವರ ಕಾಲೇಜು ದಿನಗಳಲ್ಲಿಯೇ ಅಂದರೆ ಸ್ನಾತಕೋತ್ತರ ಪದವಿಯಲ್ಲೇ ನಡೆದಿದೆ. ರಾಜೇಶ್ವರಿ ಅವರು ತತ್ವಶಾಸ್ತ್ರದ ವಿದ್ಯಾರ್ಥಿನಿಯಾದರೆ, ತೇಜಸ್ವಿ ಅವರು ಕನ್ನಡ ವ್ಯಾಸಂಗ ಮಾಡುತ್ತಿದ್ದ ವಿದ್ಯಾರ್ಥಿ, ರಾಜೇಶ್ವರಿ ಮತ್ತು ತೇಜಸ್ವಿ ಅವರ ಪರಿಚಯವಾದದ್ದು ಇವರಿಬ್ಬರ ಸ್ನೇಹಿತರಾದ ಜೂಲಿಯಟ್ ವೆನ್ನಿ ಮತ್ತು ಕೃಷ್ಣಮೂರ್ತಿಯರ ಮೂಲಕ, ಈ ಭೇಟಿಯ ನಂತರ ಪ್ರತಿದಿನವೂ ತೇಜಸ್ವಿ ಮಾತಿಗೆ ಸಿಗುತ್ತಿದ್ದರು. ಹಲವಾರು ಚರ್ಚೆ, ಓಡಾಟಗಳ ಮೂಲಕ ಇಬ್ಬರ ನಡುವೆ ಭಾಂದವ್ಯ ಗಟ್ಟಿಯಾಗುತ್ತಾ ಹೋಯಿತು ಎಂದು ರಾಜೇಶ್ವರಿಯವರು ಹೇಳುತ್ತಾರೆ.

ತಮ್ಮ ಪ್ರೇಮ ನಿವೇದನೆಯನ್ನು ರಾಜೇಶ್ವರಿಯವರೇ ಮೊದಲು ತೇಜಸ್ವಿಯ ಮುಂದೆ ತೆರೆದಿಡುತ್ತಾರೆ. ಇದಕ್ಕೆ ಎರಡು ದಿನದ ಸಮಯವನ್ನು ಕೇಳಿದ ತೇಜಸ್ವಿ ಎರಡು ದಿನಗಳ ನಂತರ ತಮ್ಮ ಒಪ್ಪಿಗೆಯನ್ನು ಸೂಚಿಸಿದ ತೇಜಸ್ವಿ ಅವರು ಮದುವೆಗೆ ಕಾಯಬೇಕಾಗುತ್ತೆ ಕಾಯುವಿಯಾ, ಬಂಧು ಬಾಂಧವರನ್ನು ಬಿಟ್ಟು ಬರಬೇಕಾಗುತ್ತೆ ಎಂದೂ ಹೇಳಿ ತಮ್ಮ ನಿರ್ಧಾರವನ್ನು ಸೂಚಿಸುತ್ತಾರೆ. ಈ ನಿರ್ಧಾರದ ಹಿಂದೆ, ಕಾಯುವಿಕೆಯ ಹಿಂದೆ ತಮ್ಮ ಸ್ವಾವಲಂಬನೆ ಬದುಕಿನ ನಿರ್ಧಾರವು ಒಳಗೊಂಡಿದೆ.

ತೇಜಸ್ವಿ ಅವರು ಪ್ರೀತಿಯ ಬಗ್ಗೆ "ಪ್ರೀತಿ ಪ್ರೇಮ ಎಲ್ಲ ವ್ಯಕ್ತಿಯ ವೈಯಕ್ತಿಕ ಸಂವೇದನೆ ಅನ್ನುವ ಮಟ್ಟದಲ್ಲಿ ಪರಿಭಾವಿಸಬೇಕು. ಆದರೆ ಒಂದು ಪ್ರತಿಷ್ಠೆಯಾಗಿ ಪರಿಭಾವಿಸಬಾರದು. ಒಬ್ಬಳು ಸಮಾಜ ಸುಧಾರಿಕೆಯು ಬ್ರಾಹ್ಮಣ ಜಾತಿಯವಳಾಗಿದ್ದು

ತನಗಿಂತ ಕೆಳ ಜಾತಿಯವನನ್ನು ಮದುವೆಯಾದರೆ ತನ್ನ ಪ್ರತಿಷ್ಠೆಗೆ ಗರಿಯಾಯಿತೆಂದು ತಿಳಿಯುವುದಾದರೆ ಎಲ್ಲವೂ ಅಹಸ್ಯವೆನಿಸುತ್ತದೆ"[೧೨] ಎಂದರು.

ತೇಜಸ್ವಿರವರು ತಮ್ಮ ಪ್ರೀತಿ, ಪ್ರೇಮಕ್ಕೆ ಜಾತಿಯ ಪ್ರತಿಷ್ಠೆ, ಕುವೆಂಪು ಮಗ ಎಂಬ ಪ್ರತಿಷ್ಠೆ ಇದಾವುದು ಬರದ ಹಾಗೆ ಅದನ್ನು ತಮ್ಮ ವೈಯಕ್ತಿಕ ಸಂವೇದನೆ ಅನ್ನುವ ಮಟ್ಟದಲ್ಲಿಯೇ ಭಾವಿಸಿದರು. ತಮ್ಮ ಪ್ರತಿಷ್ಠೆ ಮೆರೆಯಲು ಅವರು ಪ್ರೀತಿಯನ್ನು ಒಪ್ಪಿಕೊಂಡದ್ದಲ್ಲ, ತಮ್ಮ ಜೀವನ ಪೂರ್ತಿ ಹಾಗೆ ನಡೆದುಕೊಂಡರು.

**ಕಾಲೇಜು ಹಂತದಲ್ಲೇ ತೇಜಸ್ವಿ ಅವರ ಜ್ಞಾನ ಸಂಪತ್ತು :**

ತೇಜಸ್ವಿ ಅವರೇ ಹೇಳಿಕೊಂಡಂತೆ "ನಾನು ಮಿಡಲ್ ಸ್ಕೂಲ್ ನಾಲ್ಕನೇ ಕ್ಲಾಸಿಗೆ ಬರುವ ಹೊತ್ತಿಗೆ ಕನ್ನಡ ಪುಸ್ತಕಗಳನ್ನು ಓದುವ ಅಭ್ಯಾಸ ಕಾಯಿಲೆ ಎನ್ನುವಷ್ಟು ಬಲವಾಗಿ ಹಿಡಿದು ಬಿಟ್ಟಿತ್ತು. ನಮ್ಮ ಮನೆಯಲ್ಲಿ ರಾಶಿ ರಾಶಿ ಪುಸ್ತಕಗಳಿದ್ದವು. ಅಲ್ಲದೆ ಕನ್ನಡದ ಎಲ್ಲ ಲೇಖಕರ ಪುಸ್ತಕಗಳ ಗೌರವ ಪ್ರತಿಗಳೂ ಪ್ರಕಟವಾದ ಕೂಡಲೆ ಅಣ್ಣನ ಅವಗಾಹನೆಗಾಗಿ ಬರುತ್ತಿದ್ದವು. ಅವನ್ನೆಲ್ಲ ಯಾವುದು ಏನೆಂದೂ ನೋಡದೆ ನಾನು ತಗೊಂಡು ಯಾವುದೊ ಮೂಲೆಯಲ್ಲಿ ಓದುತ್ತ ಕುಳಿತು ಬಿಡುತ್ತಿದ್ದೆ".[೧೩]

ತೇಜಸ್ವಿ ಅವರು ಶಾಲಾಹಂತದಿಂದಲೇ ತಮ್ಮ ಜ್ಞಾನ ಸಂಪತ್ತನ್ನು ವಿಸ್ತರಿಸಿಕೊಳ್ಳುತ್ತಾ ಬೆಳೆದಂತವರು ಕಾಲೇಜು ಹಂತದಲ್ಲೇ ತಮ್ಮ ಕಥೆಗಳನ್ನು ಬರೆಯಲು ಪ್ರಾರಂಭಿಸಿದರು. ಕಾಲೇಜು ಹಂತದಲ್ಲಿ ಸಾಹಿತ್ಯದ ಬಗ್ಗೆ ಎಷ್ಟು ಆಳವಾಗಿ ತಿಳಿದುಕೊಂಡಿದ್ದರು ಎಂಬುದಕ್ಕೆ ರಾಜೇಶ್ವರಿ ತೇಜಸ್ವಿ ಅವರು ಒಂದು ಉದಾಹರಣೆ ನೀಡುತ್ತಾರೆ. ತೇಜಸ್ವಿ ಅವರು ಒಂದು ವಿಚಾರ ಸಂಕೀರ್ಣದಲ್ಲಿ ಪಂಪನ ಬಗ್ಗೆ ಹೇಳಿರುವ ಮಾತು. "ಪಂಪನ ಅಭ್ಯಾಸದ ತೀವ್ರಾವಶ್ಯಕತೆ ಇದೆ ಎಂದು ನನಗೇಕೆ

---

[೧೨] ನನ್ನ ತೇಜಸ್ವಿ – ರಾಜೇಶ್ವರಿ ತೇಜಸ್ವಿ ಪು.ಸಂ. ೧೩, ೧೪

[೧೩] ಅಣ್ಣನ ನೆನಪು – ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಪು.ಸಂ. ೧೭

ತೋರುತ್ತದೆಂದರೆ ಆತ ನಮ್ಮ ಭಾಷೆಯ ಮೊಟ್ಟ ಮೊದಲನೆಯ ಶ್ರೇಷ್ಠ ಕವಿ. ಇದು ಸತ್ಯವಾದ ಪಕ್ಷದಲ್ಲಿ ಪಂಪಕವಿಯ ಸತ್ವವನ್ನು ಅರ್ಥ ಮಾಡಿಕೊಳ್ಳುವುದರ ಮೂಲಕ ಕನ್ನಡ ಭಾಷೆಯ ಮೂಲಭೂತವಾದ ಗುಣಾವಗುಣಗಳನ್ನು ನಾವು ವಿವೇಚಿಸಬಹುದು. ಹೀಗೆಂದಾಗ ಕನ್ನಡ ಭಾಷೆಯ ಸೃಷ್ಠಿಕರ್ತ ಪಂಪ ಎಂದು ನಾನು ಹೇಳುತ್ತಿಲ್ಲ ಆದರೆ ಒಂದು ಭಾಷೆಯಲ್ಲಿ ಬರುವ ಮೊದಲ ಸಮರ್ಥ ಕವಿಯ ಅರ್ಧಾಂಶವನ್ನು ಭಾಷೆಯೂ ಭಾಷೆಯ ಆರ್ಧಾಂಶವನ್ನು ಕವಿಯೂ ಬೇಕು ಬೇಕಾದ ಕಡೆಗೆ ತಿರುಗಿಸಲು ಸಾಧ್ಯವಾಗದೆ ಕೊಂಬೆಗಳಂತೆ ಯಾವುದೋ ಒಂದು ದಿಶೆಯಲ್ಲಿ ಶಾಶ್ವತವಾಗಿ ಪ್ರತಿಷ್ಠಾಪಿಸಿ ಬಿಡುತ್ತಾರೆ. ಆದುದರಿಂದ ಇಂತಹ ಕವಿಯೊರ್ವನ ಕಾವ್ಯಾಭ್ಯಾಸ ತನ್ನ ಭಾಷೆಯ ಪದಗಳ ಸಾಹಿತ್ಯಕ ಉಪಯೋಗವನ್ನು ಮೊದಲ ಬಾರಿಗೆ ನಿರೂಪಿಸಿದವನನ್ನೂ ಅರಿಯುವುದಾಗುತ್ತದಲ್ಲದೆ, ಆ ಭಾಷೆಯ ಸಂವೇದನಾಶಕ್ತಿ, ಸ್ವರೂಪ, ಸಾಮರ್ಥ್ಯ, ಕೊರೆತೆ ಇತ್ಯಾದಿಗಳನ್ನು ಮೂಲಭೂತವಾಗಿ ಅರಿತಂತಾಗುತ್ತದೆ"[೧೪] ಅವರ ಜ್ಞಾನವನ್ನು ತಿಳಿಸುತ್ತದೆ.

ತೇಜಸ್ವಿ ಕಾಲೇಜು ಹಂತದಲ್ಲೆ ಜ್ಞಾನ ಸಂಪತ್ತನ್ನು ಪಡೆದವರಾಗಿದ್ದರು ಓದಿನಲ್ಲಿ ಅಷ್ಟೇ ಅಲ್ಲ, ಸಂಗೀತ, ಫೋಟೊಗ್ರಫಿ, ಯಂತ್ರಗಳ ಬಗ್ಗೆ ಅಷ್ಟೇ ಆಸಕ್ತಿ ಮತ್ತು ಪ್ರತಿಭೆ ಅವರ ಕಾಲೇಜು ಹಂತದಲ್ಲಿಯೇ ಇತ್ತು ಎಂಬುದರ ವಿವರವನ್ನು ನಾವು "ಅಣ್ಣನ ನೆನಪಿನಲ್ಲಿ ನೋಡಬಹುದಾಗಿದೆ.

ಕಾಲೇಜು ಹಂತದಲ್ಲಿ ತೇಜಸ್ವಿ ಮತ್ತು ರಾಜೇಶ್ವರಿಯವರ ನಡುವೆ ಪ್ರೇಮ ಸಂಬಂಧವಿದ್ದರೂ ಕೂಡ ತೇಜಸ್ವಿ ಕಾಲೇಜು ಹಂತ ಮುಗಿದ ಮೇಲೆ ಯಾವ ಕಾಲೇಜಿಗೂ ಅಧ್ಯಾಪಕ ವೃತ್ತಿಗೆ ಹೋಗಲಿಲ್ಲ ಸ್ವತಂತ್ರ್ಯವಾಗಿ ಕಾಲೂರಿದ ನಂತರ ಮದುವೆಯಾಗುತ್ತೇನೆಂದು ನಿರ್ಧರಿಸುತ್ತಾರೆ. ತೇಜಸ್ವಿ ಬದುಕಿನ ಅನಿವಾರ್ಯತೆಯ ಬಗ್ಗೆ ರಾಜೇಶ್ವರಿಯವರಿಗೆ ಬರೆದ ಪತ್ರದಲ್ಲಿ ತಿಳಿಸಿದ್ದಾರೆ. "ನಾನು ಬಲವಾಗಿ ಕಾಲೂರಿ

---

[೧೪] ನನ್ನ ತೇಜಸ್ವಿ – ರಾಜೇಶ್ವರಿ ತೇಜಸ್ವಿ ಪು.ಸಂ. ೨೦

ನಿನ್ನನ್ನು ಮದುವೆಯಾಗಬೇಕೆಂದು ನನ್ನ ಆಸೆ. ಅದಕ್ಕಿಂತ ಮಿಗಿಲಾಗಿ ನೀನು ಕೊಟ್ಟಕೊನೆಯದಾಗಿ ನಾನು ಬೇಕೋ ಬೇಡವೋ ನಿರ್ಧರಿಸಬೇಕಾಗುತ್ತದೆ. ನಿನ್ನ ಪ್ರೇಮಕ್ಕೆ ಆ ಅಗ್ನಿ ಪರೀಕ್ಷೆ ಸಧ್ಯದಲ್ಲೇ ಬರುತ್ತದೆ. ನಿನ್ನ ಅಚಲ ನಿರ್ಧಾರಗಳ ಬೇರೆಲ್ಲ ಅಲುಗುವ ಪರಿಸ್ಥಿತಿಯೂ ಬಂದೀತು. ನೀನು, 'ಬೇಡ ನಾನು' ಎಂದರೆ ನೋವಾಗುತ್ತದೆ ನಿಜ. ಅನಂತ ಯಾತನೆಯಾಗುತ್ತದೆ ನಿಜ. ಆದರೆ ಬದುಕಿನ ಅನಿವಾರ್ಯತೆ ಅದನ್ನೂ ಮೀರಿದ್ದು"[೧೫]. ಈ ಬದುಕಿನ ಅನಿವಾರ್ಯತೆಗಾಗಿ ತೇಜಸ್ವಿ ತಮ್ಮ ಪ್ರೇಮವನ್ನು ಕೂಡ ತ್ಯಜಿಸಲು ತಯಾರಿದ್ದರು.

ಇನ್ನೊಂದು ಕಡೆ ತೇಜಸ್ವಿಯವರು ಆರ್ಥಿಕವಾಗಿ ಸ್ಥಿರವಾಗಿಲ್ಲವಾದರೆ ನಮ್ಮ ಪರಿಸ್ಥಿತಿ ಹೇಗಾಗುತ್ತದೆ ಎಂಬುದನ್ನು ವಿವರಿಸಿದ್ದಾರೆ. ರಾಜೇಶ್ವರಿಯವರು ತೇಜಸ್ವಿಯವರನ್ನು ಮದುವೆ ಮಾಡಿಕೊಳ್ಳುವಂತೆ ಕೇಳಿಕೊಂಡಾಗ ಯಾವುದೇ ಉದ್ಯೋಗವಿಲ್ಲದ ತೇಜಸ್ವಿ ಉತ್ತರ ಕೊಡುವ ರೀತಿ ಇದು" "Intercaste ಮದುವೆಯಾದ್ದರಿಂದ ಎಲ್ಲರ ಕೋಪ ಅಸಹಕಾರಕ್ಕೂ ನಾವು ಗುರಿಯಾಗಲೇ ಬೇಕಾಗುತ್ತದೆ. ಅದಕ್ಕೆ ಮೊದಲೇ ಖಂಡಿತ ಆರ್ಥಿಕವಾಗಿ ನಾವು ಸ್ಥಿರವಾಗಿಲ್ಲದಿದ್ದರೆ ಖಂಡಿತ ಬಹಳ ಕ್ಲೈಬ್ಯದ ಬಾಳನ್ನು ನಡೆಸಬೇಕಾಗುತ್ತದೆ. ಜೀವಮಾನಾದ್ಯಂತ ಅನುಭವಿಸುವ ಈ ಯಾತನೆ ಕೊನೆಗೆ ನಿನ್ನ ಮಗಳಿಗೆ ಮದುವೆ ಮಾಡಲೂ ಅಸಾಧ್ಯವಾಗಿ ಕಂಡವರ ಕಾಲು ಹಿಡಿಯುವ ಅಸಹನೀಯ ಸ್ಥಿತಿಯನ್ನು ನಾನು ಕಲ್ಪಿಸಕೊಳ್ಳಲಾರೆ."[೧೬]ಎಂದಿದ್ದಾರೆ.

ಈ ಹಂತದಲ್ಲಿ ತೇಜಸ್ವಿಯ ಪ್ರಾರಂಭದ ಸಾಹಿತ್ಯಕ ಚಟುವಟಿಕೆ ಶುರುವಾಗಿ ಉತ್ತಮ ರೀತಿಯಲ್ಲಿ ನಡೆಯುತ್ತಿರುತ್ತದೆ, ಈ ಸಮಯದಲ್ಲಿಯೇ ತೇಜಸ್ವಿ ಸಂಗೀತದ ಬಗ್ಗೆ ಅಪಾರ ಆಸಕ್ತಿ ಬೆಳೆಸಿಕೊಂಡಿದ್ದು ಅದನ್ನು ಕಲಿಯಲು ಬೊಂಬಾಯಿಗೆ ಸಿದ್ಧತೆ

---

[೧೫] ನನ್ನ ತೇಜಸ್ವಿ – ರಾಜೇಶ್ವರಿ ತೇಜಸ್ವಿ ಪು.ಸಂ. ೪೨
[೧೬] ನನ್ನ ತೇಜಸ್ವಿ – ರಾಜೇಶ್ವರಿ ತೇಜಸ್ವಿ ಪು.ಸಂ. ೧೦೨

ನಡೆಸಿ ಮತ್ತೆ ಅದನ್ನು ಅಲ್ಲಿಗೆ ನಿಲ್ಲಿಸುತ್ತಾರೆ. ನಂತರ ಅವರು ಒಂದು ಮಾಸ ಪತ್ರಿಕೆಯನ್ನು ತರಲು ಹೊರಡುತ್ತಾರೆ. ತೇಜಸ್ವಿ ಈ ಎಲ್ಲಾ ಕೆಲಸಗಳಲ್ಲಿಯೂ ತಮ್ಮ ತನತೆಯನ್ನು ಉಳಿಸಿಕೊಳ್ಳಲು ಯತ್ನಿಸಿದವರು. ಆ ಸಮಯದಲ್ಲಿ ಈ ಆಸಕ್ತಿಗಳ ಬಗ್ಗೆ ತೇಜಸ್ವಿ "ಇದೊಂದು ಕಗ್ಗತ್ತಲಲ್ಲಿ ತೆವಳುವ ಕೆಲಸ ಜೀವನ ನನ್ನ ಬಗೆಯಲ್ಲಿ ಇರುವ ಈ ಹುಚ್ಚುಗಳು ಆದೇನು ನನ್ನನ್ನು ಉಳಿಸಲು ಬರುತ್ತವೋ ಹಾಳು ಮಾಡಲು ಬರುತ್ತವೋ ನೋಡಬೇಕು ಯಾಕೆ ಇವನ್ನೆಲ್ಲ ನಿನಗೆ ಹೇಳಿರಲಿಲ್ಲವೆಂದರೆ ಇವೆಲ್ಲ ರೂಪುಗೊಳ್ಳುವ ಅಶರೀರ ಪಿಶಾಚಗಳು ಏನು ಮಾಡಬೇಕೆಂದಿರುವಿ ಎಂದು ಯಾರಾದರೂ ಕೇಳಿದರೆ ನಾನು ನನ್ನನ್ನು ಭಯಂಕರ ಆತ್ಮಾಂದೋಳನದಲ್ಲಿ ಮುಳುಗಿಸಿಕೊಳ್ಳಬೇಕಾಗುತ್ತದೆ."[೧೭] ಎಂದು ತಮ್ಮ ಮನಸ್ಸಿನಲ್ಲಿ ನಡೆಯುತ್ತಿದ್ದ ತೊಳಲಾಟಗಳನ್ನು ತಿಳಿಸಿದ್ದಾರೆ.

ಪ್ರೆಸ್ಸನ್ನು ಮಾಡಲು ಹೋಗಿ ಕೈ ಸುಟ್ಟುಕೊಂಡ ತೇಜಸ್ವಿ ತಮ್ಮ ಸ್ವಾತಂತ್ರ್ಯವೇ ನಷ್ಟವಾಗಿ ಹೋಗುತ್ತದೆ ಎನಿಸಿದಾಗ ಪ್ರೆಸ್ಸಿನಿಂದ ಹೊರಬಂದರು "ನಾವು ಬಯಸಿದಂತೆ ಬದುಕುವ ಸ್ವಾತಂತ್ರ್ಯ ಯಾವತ್ತೂ ಒಂದು ಭಯಾನಕ ಹೋರಾಟದ ಫಲವೇ ಹೊರತು ಸುಲಭಕ್ಕೆ ಸಿಗುವುದಲ್ಲ".

"ಈ ಮೈಸೂರಿನಿಂದ ಎಲ್ಲಿಗಾದರೂ ದೂರ ಹೋಗಬೇಕೆಂದಿದ್ದೆ. ಇಲ್ಲೇ ಉಳಿಯಬೇಕಾಯ್ತೇ ಎಂದು ಯೋಚನೆಯಾಗಿದೆ ಏನಾಗಿದ್ದೇನೆ ಏನಾಗಬೇಕೆಂದಿದ್ದೆ ಏನಾಗಬೇಕೆಂದಿರುವೆ ಎಲ್ಲಾ ಮಾನಸಿಕ ತುಮುಲದಲ್ಲಿ ಸಿಕ್ಕಿಕೊಂಡಿದೆ. ಎಲ್ಲಕ್ಕಿಂತ ಮೊದಲು ನಾನು ಮೈಸೂರಿನ ಇದೇ ಮನೆ ಇದೇ ಬೀದಿ ಇದೇ ರಸ್ತೆ ಇದೇ ರೂಮುಗಳ ನಡುವೆ ಬಂಧಿಯಾಗಿರಬೇಕೆ ಎಂದು ಬೇಜಾರಾಗುತ್ತಿದೆ ಕಾಲ

---

[೧೭] ನನ್ನ ತೇಜಸ್ವಿ – ರಾಜೇಶ್ವರಿ ತೇಜಸ್ವಿ ಪು.ಸಂ. ೧೦೮

ಇದಕ್ಕೊಂದು ಉತ್ತರ ಸಿದ್ಧಪಡಿಸೀತು"[೧೮] ಪ್ರೆಸ್ಸಿನಿಂದ ಹೊರನಡೆದ ಸಮಯದಲ್ಲಿ ತೇಜಸ್ವಿ ತೊಳಲಾಟ ಹೀಗಿತ್ತು.

ತೇಜಸ್ವಿ ತಮ್ಮ ಮನಸ್ಸಿನಲ್ಲಿಯೇ ಸ್ವಾತಂತ್ರ್ಯವಾಗಿ ಬದುಕುವ ಯೋಚನೆಯಲ್ಲಿ ಹೋರಾಟ ಮಾಡುತ್ತಿದ್ದರು. ಸ್ವಾತಂತ್ರ್ಯವಾಗಿ ಬದುಕುವ, ಹಂಬಲ, ತುಡಿತ, ಅವರ ಜೀವನದಲ್ಲಿ ತೀವ್ರತರವಾಗಿದ್ದಿತು. ಅವರು ತಮ್ಮ ಬದುಕನ್ನು ರೂಪಿಸಿಕೊಳ್ಳಲು ಒದ್ದಾಡುತ್ತಿದ್ದರು. ಅವರಿಗೆ ಆ ಸಮಯದಲ್ಲಿ ಯಾವ ಮಾರ್ಗವನ್ನು ಆಯ್ಕೆ ಮಾಡಿಕೊಳ್ಳಲಿ ಎಂಬ ಗೊಂದಲ. ಇತ್ತ ಅಪ್ಪನ ಪ್ರಭಾವದಿಂದ ದೂರಸರಿಯಬೇಕು, ಯಾರ ಕೈಕೆಳಗೂ ಉದ್ಯೋಗ ಮಾಡಲು ಇಷ್ಟಪಡದ ತೇಜಸ್ವಿ ಸ್ವಾವಲಂಬಿಯಾಗಿ, ಸ್ವಾತಂತ್ರ್ಯವಾಗಿ ಬದುಕುಲು ಹಾತೊರೆಯುತ್ತಿದ್ದರು. ಬಹುಶ: 'ಹುಲಿಯೂರಿನ ಸರಹದ್ದು' ಕಥೆ ಅವರ ಇದೇ ಮನಸ್ಥಿತಿಯನ್ನು ತಿಳಿಸುತ್ತದೆ. ಅಲ್ಲಿನ ಕಥಾನಾಯಕ ಹದ್ದಿನಂತೆ ಸ್ವತಂತ್ರ್ಯವಾಗಿ ಹಾರಾಡಲು ಭಯಸುತ್ತಾನೆ. ತೇಜಸ್ವಿಗೆ ಸ್ವತಂತ್ರವಾಗಿ ಬದುಕುವ ಹಂಬಲ ಎಷ್ಟಿತ್ತೆಂದರೆ ಅವರ ಈ ಕೆಳಗಿನ ಮಾತುಗಳಿಂದ ಅರಿಯಬಹುದು.

"ನನಗೋ ಯಾಕೆ ಈ ತೆರ ಸ್ವಾತಂತ್ರ್ಯ ಸ್ವಾತಂತ್ರ್ಯ ಎಂದು ಹುಚ್ಚು ಹಿಡಿಯತೋ ಏನೋ ನನಗೆ ತಿಳಿದಂತೆ ಇತರರಿಗಿಂತ ಮಿಗಿಲಾದ ಬಂಧನ ನನಗೆಂದೂ ಬಿದ್ದುದಿಲ್ಲ. ಆದರೆ ಒಳಗೆ ನನಗೆ ಸದಾ ಇಲ್ಲದ ಒಂದು ಬಿಡುಗಡೆಯ ಹಂಬಲ. ಸದ್ಯದಲ್ಲಿಯೇ ಬಹು ಮುಖ್ಯವಾದ ಘಟನೆಗಳ ನೇಕವು ನಡೆದು ಹೋಗಬಹುದೆನ್ನಿಸುತ್ತದೆ. ಆದರೆ ಈ ಕಾಲಯಾನದಲ್ಲಿ ಯಾವುದು ತಾನೆ ಮುಖ್ಯ. ಬಹುಶ: ನನ್ನ ಜೀವನದ ಪರಿಧಿಯೊಳಗೆ ಇದು ಮುಖ್ಯ ಅದು ಮುಖ್ಯ ಎಂದೆಲ್ಲ ಹೇಳಬಹುದು ಎಂಥ ಭಯಾನಕ ಮುಖ್ಯ ಘಟನೆ ನಡೆದರೂ ಅದು ಕೊನೆಗೆ ಈ ಜಗತ್ತಿನ ನಿಷ್ಕಾರಣ ಆಗು ಹೋಗಿನ ಪರಿಧಿಯೊಳಗೆ ನಡೆಯುವುದು ತಾನೆ!

[೧೮] ನನ್ನ ತೇಜಸ್ವಿ – ರಾಜೇಶ್ವರಿ ತೇಜಸ್ವಿ ಪು.ಸಂ. ೧೨೭

ಮುಂದೇನಾಗುತ್ತದೆ ಅನ್ನಿಸೋದೇ ಇಲ್ಲ. ಯಾಕೆ ಹೊಸ ಗೋಳುಗಳನ್ನೆಲ್ಲ ತೊರೆದು ಬರೀ ಸತ್ಯಾರ್ಥಿಯಾಗಿ ಜೀವಿಸಬಾರದು! ಅನ್ನಿಸುತ್ತಿದೆ.

ಎಲ್ಲರೂ ಅಂತರ್ಗಾಮಿಯಾದ ಸ್ವಾರ್ಥಿಗಳು ನನ್ನ ಕಾಲ ಮೇಲೆ ನಾನು ನಿಲ್ಲದೆ ಮದುವೆಯಾದರೆ ಗುಲಾಮೀಯತೆಗೆ ನನ್ನನ್ನು ಜೊತೆಗೆ ಇನ್ನೊಬ್ಬರನ್ನು ಗುರಿ ಮಾಡಿದಂತೆ, ಮಕ್ಕಳಾದರೆ ಗುಲಾಮರಿಗೆ ಜನ್ಮ ವಿತ್ತಂತೆ".

"ಈ ಜೀವನ ಎಷ್ಟೊಂದು ರೋಮಾಂಚಕಾರಿಯೋ ಅದಕ್ಕಿಂತ ಆರರಷ್ಟು boring ಆಗಿದೆ. ಇದು ಸತ್ಯ, ನೀನು excitement hunter ಆಗಬಾರದು. ಈ ಜೀವನದ ಏಕತಾನದ ರಗಳೆಗಳನ್ನು ತಾಳಲಿಕ್ಕೆ ಬಾರೀ Bore Resistance ಶಕ್ತಿ ಬೇಕು. ಮದುವೆ ಎಂದೂ ಮಹತ್ತರ ಘಟನೆಯಲ್ಲ ಆನಂತರದ ಬದುಕು ಮುಖ್ಯವಾದುದು. ಸ್ವಾತಂತ್ರ್ಯವನ್ನು ಗಳಿಸಿಕೊಂಡ ದಾರಿ ಮುಖ್ಯವಾದುದು. ಜೀವನದ ಹೋರಾಟ ಬರೀ ಹಣಾಹಣೆಯ ರೂಪದಲ್ಲಿ ಮೈದೋರುತ್ತದೆಂದು ತಿಳಿದಿದೀ ನೀನು ತಾಳಿಕೊಂಡಿರುವ ಬೋರೋ ಒಂದು ಹೋರಾಟವೇ. ನಿರೀಕ್ಷೆ ಒಂದು ಹೋರಾಟ. ತಾಳ್ಮೆ ಒಂದು ಹೋರಾಟ ನನ್ನ ಮುಂದಿರೋದು ಈಗ ಬಾಳಿನ ಹೋರಾಟ ಸಮರ ಇಂಥವನನ್ನು ಪ್ರೇಮಿಸಿದಕ್ಕೆ ನೀನು ತೆರಬೇಕಾದ ದಂಡವಿರಬಹುದು. ಏನೇನು ದುರತಗಳು? ಕಾದಿವೆಯೋ ಭವಿಷ್ಯದ ಅಗಮ್ಯ ಗರ್ಭದಲ್ಲಿ ಹೋರಾಟ ಅನಿವಾರ್ಯ ರಾಜೇಶ್, ಸಂದಿಗ್ಧದಲ್ಲಿ ಕೊಂಚ ಸ್ಥೈರ್ಯದಿಂದಿರೋದು ಎಷ್ಟೊಂದು ಮುಖ್ಯ. ನಾನು ಈ ಊರಲ್ಲಿ ಕುಳಿತೂ ಒಂಟಿಗೇಡಿಯಾಗಿ ಭಾವಿಸುತ್ತೇನೆ. ಗಾಳಿಯಂತೂ ನನಗೆ ವಿರುದ್ಧ ಗತಿಯಲ್ಲಿ ಬೀಸುತ್ತಿದೆ. ಏನೋ ಎಂತೋ ಮಹಾ ವಿಚಕ್ಷಣೆಯಿಂದ ಪ್ರಸ್ತುತ ಪರಿಸ್ಥಿತಿಯಿಂದ ಪಾರಾಗಬೇಕಾಗಿದೆ".[೧೯]

---

[೧೯] ನನ್ನ ತೇಜಸ್ವಿ – ರಾಜೇಶ್ವರಿ ತೇಜಸ್ವಿ ಪು.ಸಂ. ೧೩೧, ೧೩೨

ಎಷ್ಟೆಲ್ಲಾ ಪ್ರಯತ್ನ ಪಟ್ಟ ತೇಜಸ್ವಿ ಕೊನೆಗೆ ತೋಟ ಮಾಡುವ ನಿರ್ಧಾರಕ್ಕೆ ಬಂದರು ಡಿಗ್ರಿ ಮುಗಿಸಿ ಹತ್ತಿರತ್ತಿರ ನಾಲ್ಕು ವರ್ಷಗಳಾದರೂ ಹೊಟ್ಟೆಪಾಡಿಗಾಗಿ ದುಡಿಮೆ ಮಾಡಲಿಲ್ಲವೆಂದು ಕೊರಗುತ್ತಿದ್ದರು. ಕುಂಟನೋ, ಕುರುಡನೋ, ಹೇಳವನೋ ಆಗಿರುವಂತೆ ಇನ್ನೊಬ್ಬರಿಗೆ ಭಾರವಾಗಿ ಕುಳಿತಿರುವೆನೆಲ್ಲ ಎಂದು ಚಿಂತಿಸುತ್ತಿದ್ದ ತೇಜಸ್ವಿ ನಿರುದ್ಯೋಗದಲ್ಲಿದ್ದಾಗ ತೋಟ ಮಾಡಿಯೇ ತಿರುವೆನೆಂದು ನಿರ್ಧರಿಸಿದರು. ತೋಟ ಮಾಡುವುದನ್ನು ತೇಜಸ್ವಿ ಅವರ ತಂದೆಯವರಿಗೆ ತಿಳಿಸಿದಾಗ "ನಮ್ಮ ಜೀವಮಾನದಲ್ಲಿ ಕೆಲವರು ಭಾರಿ ತಿದ್ದಲಾಗದಂಥ ತಪ್ಪು ಮಾಡಿಕೊಂಡು ಬಿಡುತ್ತೇವೆ. ಆ ತರಹದ್ದೇನೋ ಆಗದಂತೆ ಮಾತ್ರ ಬಹಳ ಹುಶಾರಗಿರು. ಸಹಸ್ರಾರು ರೂ.ಗಳ ವ್ಯವಹಾರ ಇದು"[೨೦] ಎಂದರಂತೆ ಕೊನೆಗೂ ತೋಟ ಮಾಡಿದ ತೇಜಸ್ವಿ ಮೈಸೂರೆಂಬ ಮಹಾನಗರವನ್ನು ಬಿಟ್ಟು ಕಾಡಿನ ಕಡೆ ನಡದೇ ಬಿಟ್ಟರು. ಅಲ್ಲಿ ತಮ್ಮದೇ ಆದಂತಹ ಮನೆ ಮಾಡಿಕೊಂಡು ಸ್ವಾತಂತ್ರ್ಯವಾಗಿ ನೆಲೆವೂರಿದರು. ಕೊನೆಗೂ ಅವರ ಸ್ವಾತಂತ್ರ್ಯದ ಕನಸು ನನಸಾಯಿತು. ಅವರು ಆರು ವರ್ಷಗಳು ಪ್ರೇಮ ಸಂಬಂಧವನ್ನು ಮದುವೆಯಾಗದೆ ಮುಂದೂಡಿ ಸ್ವಾತಂತ್ರ್ಯವಾಗಿ ನೆಲೆ ನಿಂತ ನಂತರವೇ ವಿವಾಹ ಕಾರ್ಯವನ್ನು ಕೈಗೊಂಡರು.

ಕಾಡಿನ ಕಡೆ ಮುಖ ಮಾಡಿದ ತೇಜಸ್ವಿ ಕಾಡಿನೊಂದಿಗೆ ಅನುಸಂಧಾನ ನಡೆಸುತ್ತಾ ಕನ್ನಡ ಸಾಹಿತ್ಯಕ್ಕೆ ಒಂದು ಹೊಸ ಪ್ರಪಂಚವನ್ನೇ ತೆರೆದಿಟ್ಟರು. ಹೊರಗೆ ಯಾವಾಗಲೂ ಒಂಟಿ ತನವನ್ನು ಇಷ್ಟ ಪಡುತ್ತಿದ್ದ ತೇಜಸ್ವಿಯ ಒಳಗೆ ಬಹುದೊಡ್ಡ ಗ್ರಾಮೀಣ ಸಮುದಾಯಗಳು ಜೀವಂತವಿದ್ದವು. ಅವರ ಆರಂಭದ ಕೆಲವು ಕತೆಗಳನ್ನು ಬಿಟ್ಟರೆ ಉಳಿದಂತೆ ಅವರ ಎಲ್ಲಾ ಬರಹಗಳ ಜೀವಕೇಂದ್ರವೇ ಮಲೆನಾಡು ಮತ್ತು ಮಲೆನಾಡಿನ ಕೆಳಜಾತಿ ಸಮುದಾಯ, ಕರ್ವಾಲೋ, ಕಿರಗೂರಿನ ಗಯ್ಯಾಳಿಗಳು ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ಬದುಕು ಮತ್ತು ಬದುಕಿನ

[೨೦] ನನ್ನ ತೇಜಸ್ವಿ – ರಾಜೇಶ್ವರಿ ತೇಜಸ್ವಿ ಪು.ಸಂ. ೧೩೫

ಕ್ರಮಗಳು ತೇಜಸ್ವಿ ಅವರು ಅನ್ವೇಷಿಸುತ್ತಿದ್ದ ಮೌಲ್ಯಗಳನ್ನು ಓದುಗರ ಮುಂದೆ ತೆರೆದಿಟ್ಟಿವೆ.

ಆಧುನಿಕತೆ, ಶಿಕ್ಷಣ, ತಂತ್ರಜ್ಞಾನ, ಪ್ರಜಾಪ್ರಭುತ್ವ ವ್ಯವಸ್ಥೆ, ಜಾಗತಿಕ ಮಾರುಕಟ್ಟೆ ಇವು ಅಭಿವೃದ್ಧಿಯ ಹೆಸರಿನಲ್ಲಿ ಭಾರತೀಯ ಗ್ರಾಮ ಸಮಾಜದಲ್ಲಿ ತರುತ್ತಿರುವ ಬದಲಾವಣೆಗಳು ಹೇಗೆ ಮನುಷ್ಯ ಮತ್ತು ನಿಸರ್ಗವನ್ನು ಅವನತಿಯ ದಾರಿಯತ್ತ ಒಯ್ಯುತ್ತಿವೆ ಎಂಬ ವಿಷಯವೇ ತೇಜಸ್ವಿಯವರ ಸಂಕಥನಕ್ಕೆ ಮೂಲ ವಸ್ತುವಾಗಿರುವುದನ್ನು ಗಮನಿಸಬಹುದು. ಇವು ಗ್ರಾಮೀಣ ಸಮುದಾಯಕ್ಕೆ ಹೊರಗಿನ ಒತ್ತಡಗಳಾಗಿರುವಂತೆ ಹಳ್ಳಿಗಳ ಒಳಗಿನ ಒತ್ತಡಗಳಾದ ಜಾತಿ ಮತ್ತು ಧಾರ್ಮಿಕ ವ್ಯವಸ್ಥೆಗಳು ಕೂಡ ಈ ಅವನತಿಯನ್ನು ತೀವ್ರಗೊಳಿಸುತ್ತಿರುವ ವಿನ್ಯಾಸಗಳನ್ನು ತೇಜಸ್ವಿ ಅವರಂತೆ ನಿರೂಪಿಸಿದ ಲೇಖಕರು ಕನ್ನಡದಲ್ಲಿ ವಿರಳ.

ತೇಜಸ್ವಿಯವರ ಹಳ್ಳಿಗಳ ಬಗೆಗಿನ ಪ್ರೀತಿ ಕೇವಲ ತೋರಿಕೆಯದಾಗಿರಲಿಲ್ಲ. ತಾವು ಸೃಷ್ಟಿಸಿದ ಪಾತ್ರಗಳ ನಡವಳಿಕೆಗಳನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡದ್ದು, ಅವರಂತೆ ಬದುಕುಲು ಪ್ರಯತ್ನಿಸಿದ್ದು ಈ ಶತಮಾನದ ದೊಡ್ಡ ಪ್ರಯೋಗ ಇವರ ಆಶಯಗಳನ್ನು ನಮ್ಮ ಕಾಲವು ಕಲಿಯಬೇಕಿರುವ ಬಹೊದೊಡ್ಡ ಪಾಠ.

# ಅಧ್ಯಾಯ-೫

## ತೇಜಸ್ವಿಯವರ ಸಾಮಾಜಿಕ ಬದ್ಧತೆ

# ಅಧ್ಯಾಯ-೫

## ತೇಜಸ್ವಿಯವರ ಸಾಮಾಜಿಕ ಬದ್ಧತೆ

ತೇಜಸ್ವಿ ಅವರು ತಮ್ಮ ಮದುವೆಯಿಂದ ಜಾತಿ-ಧರ್ಮಗಳ ಕಟ್ಟೆಯನ್ನು ಒಡೆದು ತಮ್ಮ ತಂದೆಯವರ ಧ್ಯೇಯ-ಧೋರಣೆಗಳನ್ನು ಸಾಕಾರಗೊಳಿಸಿದರು. ಕುವೆಂಪು ರವರ ವಿಶ್ವಮಾನವ ಸಂದೇಶ ಮತ್ತು ಮಂತ್ರ ಮಾಂಗಲ್ಯ ಧೋರಣೆಯನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಜಾತಿಯನ್ನು ಲೆಕ್ಕಿಸದೆ, ವರದಕ್ಷಿಣೆ, ತೆಗೆದುಕೊಳ್ಳದೆ, ಶಾಸ್ತ್ರಾಚಾರಗಳಿಗೆ ಕಟ್ಟುಬೀಳದೆ, ಅಂತಸ್ತಿನ ಪ್ರದರ್ಶನ ಮಾಡದೆ, ದುಂದು ವೆಚ್ಚ ಮಾಡದೇ ಸರಳವಾಗಿ 'ಮಂತ್ರಮಾಂಗಲ್ಯ' ಮುಖೇನ ತಮ್ಮ ವಿವಾಹ ಜೀವನಕ್ಕೆ ಕಾಲಿಟ್ಟವರು.

ಕುವೆಂಪುರವರು ಅವರ ಧ್ಯೇಯ ವಾದ 'ಮಂತ್ರಮಾಂಗಲ್ಯ' ಮುಖೇನ ತಮ್ಮ ಮಕ್ಕಳಿಗೆಲ್ಲಾ ಮದುವೆಯನ್ನು ಮಾಡಿಸಿದವರು. ಕುವೆಂಪುರವರು ಮೊಟ್ಟಮೊದಲ ಸರಳ ವಿವಾಹ ಮಾಡಿಸಿದ್ದು ತೇಜಸ್ವಿ ಅವರದ್ದೇ.

**ಕುವೆಂಪುರವರು ಹೇಳಿದಂತೆ 'ಮಂತ್ರಮಾಂಗಲ್ಯ'ದತತ್ವ:**

**ಮದುವೆ ಯಾರಿಗೂ ಹೊರೆಯಾಗದಿರಲಿ :**

ಮದುವೆ ಎಂದರೆ ಪರಸ್ಪರ ಒಲಿದ ಅಥವಾ ತಂದೆ ತಾಯಿಗಳೂ ಪೋಷಕರೂ ನಿರ್ಣಯಿಸಿದ ವಧೂವರರು ಹಿರಿಯರ ಸಮ್ಮುಖದಲ್ಲಿ, ದೈವ ಸಾನಿಧ್ಯದಲ್ಲಿ ಒಂದಾಗಿ ದಾಂಪತ್ಯದ ವ್ರತವನ್ನು ಸ್ವೀಕರಿಸುವುದು, ಇದು ಗಂಭೀರವಾದ ಮಧುರವಾದ ಮತ್ತು ಆಧ್ಯಾತ್ಮಿಕವಾದ ವಾತಾವರಣದಲ್ಲಿ ನಡೆಯಬೇಕಾದ ವ್ರತ. ಆದರೆ ಈಗ ಆಗುತ್ತಿರುವುದು ಹೇಗೆ? ತಮ್ಮ ಮತ್ತು ನೆರೆಹೊರೆಯವರ ಮನಶಾಂತಿಯನ್ನು ಕೆಡಿಸುವಂತಹ ವಾದ್ಯಗಳು, ರೆಕಾರ್ಡುಗಳು,

ಧ್ವನಿವರ್ಧಕಗಳ ಮೂಲಕ ಅರಚುತ್ತಿವೆ. ಪುರೋಹಿತರು ವಧೂವರರಿಗಾಗಲೀ, ಹಿರಿಯರಿಗಾಗಲಿ, ಕೆಲವೊಮ್ಮೆ ತಮಗೂ ತಿಳಿಯದ ಮಂತ್ರಗಳನ್ನು ಗೊಣಗುತ್ತಿರುತ್ತಾರೆ. ಆ ಗದ್ದಲ ದಾಂಧಲೆಗಳಲ್ಲಿ ಅವನ್ನ ಯಾರೂ ಗಮನಿಸಿ ಕೇಳುತ್ತಲೂ ಇರುವುದಿಲ್ಲ ಅನೇಕ ಸಂದರ್ಭಗಳಲ್ಲಿ ಅಷ್ಟೇನೂ ಚೈತನ್ಯವಿಲ್ಲದ ಕನ್ಯಾಪಿತೃಗಳನ್ನು ಹಿಂಡಿ ಅವರು ನೂರಾರು ಸಾವಿರಾರು ಜನಕ್ಕೆ ಊಟ ಹಾಕುವಂತೆ ಮಾಡಲಾಗುತ್ತದೆ. ಇನ್ನು ವರದಕ್ಷಿಣೆ, ವರೋಪಚಾರಗಳ ಹಾವಳಿಗಳನ್ನು ಕುರಿತು ಪ್ರಸ್ತಾಪಿಸುವುದೇ ಬೇಡ.

'ಮಂತ್ರ ಮಾಂಗಲ್ಯ' ಎಂಬುದು ಪುಸ್ತಕದ ಮಂತ್ರಗಳ ಸಂಕಲನದ ಹೆಸರು ಮಾತ್ರವಲ್ಲ. ಇದೊಂದು ವಿವಾಹ ವಿಧಾನ ಜೀವನ ವಿಧಾನವೂ ಆಗಬೇಕೆಂಬುದು ಆಶೆ. ವಧೂವರರು ಮದುವೆಯ ಹೆಸರಿನಲ್ಲಿ ಮದುವೆಯ ಸಂದರ್ಭದಲ್ಲಿ ಪರಸ್ಪರ ಸೂರೆಗೆ ತೊಡಗುವಂತಿಲ್ಲ. ಉಡುಪುಗಳ ಮೆರವಣಿಗೆಯಿಲ್ಲ, ಇತರರ ಕಿವಿಯನ್ನು ಕೊರೆಯುವ ಸಂಗೀತವಿಲ್ಲ, ಚಪ್ಪರ, ಡೇರಾ, ಗುಡಿಗುಡಾರಗಳಿಲ್ಲ, ರಾಹುಕಾಲ, ಗುಳಿಕಕಾಲ, ಯಮಗಂಡ ಕಾಲಗಳನ್ನು ಗುಣಿಸುವಂತಿಲ್ಲ, ನೂರಾರು ಸಾವಿರಾರು ಜನಕ್ಕೆ ಪಂಕ್ತಿ ಪಂಕ್ತಿ ಭೋಜನವೂ ಇಲ್ಲ. ವಧೂವರರು ಅವರ ತಂದೆ ತಾಯಿಗಳೂ ಒಪ್ಪಿದ ದಿನ ಅನುಕೂಲವಾಗುವ ಸ್ಥಳದಲ್ಲಿ ಅವರಿಗೆಲ್ಲ ಇಷ್ಟವಾದ ದೇವರುಗಳ, ಹಿರಿಯರ ಚಿತ್ರಗಳ ಸಾನಿಧ್ಯದಲ್ಲಿ ಮದುವೆ ನಡೆಸಬಹುದು. ಆದಷ್ಟು ಕಡಿಮೆ ಜನ, ಇಷ್ಟ ಮಿತ್ರರು ಸೇರಿದರೆ ಸಾಕು, ಅಲ್ಲಿ, ದೊಂಬಿಯಾಗಬೇಕಾಗಿಲ್ಲ. ಶಾಂತವಾದ ವಾತಾವರಣದಲ್ಲಿ ಮದುವೆ ನಡೆಯಬೇಕು. ಇಲ್ಲಿನ ಮಂತ್ರಗಳನ್ನು ಯಾವ ಪುರೋಹಿತರು ಓದಬೇಕಾಗಿಲ್ಲ, ವಧೂವರರೂ ಇಷ್ಟಮಿತ್ರರೂ ಇವುಗಳನ್ನು ಓದಬಹುದು.

ಪರಸ್ಪರ ಹಾರ ಹಾಕಿಕೊಂಡಮೇಲೆ ವರನು ದಾಂಪತ್ಯದ ಪರಸ್ಪರ ಪ್ರೇಮ ನಿಷ್ಠೆಯ ಸಂಕೇತವಾಗಿ ವಧುವಿಗೆ ಮಾಂಗಲ್ಯವನ್ನು ಕಟ್ಟುತ್ತಾನೆ.

ಹೀಗೆ ಸಹಸ್ರಾರು ವರ್ಷಗಳ ಕಾಲ ಭಾರತವು ಯಾವ ಮೌಲ್ಯಗಳನ್ನು ದೊಡ್ಡದು ಎಂದು ಭಾವಿಸಿ ಆರಾಧಿಸುತ್ತಾ ಬಂದಿದೆಯೋ ಆ ಎಲ್ಲಕ್ಕೂ ಸಂಕೇತಗಳಾಗಿರುವ ಶಕ್ತಿಯನ್ನು ವಧೂವರರು ತಮ್ಮ ಬದುಕಿನ ಈ ಅಮೃತ ಮೂಹೂರ್ತದಲ್ಲಿ ಈ ಮಂತ್ರಗಳ ಮೂಲಕ ಆಹ್ವಾನಿಸುತ್ತಾರೆ.

ಮದುವೆ ಹೆಸರಿನಲ್ಲಿ ಆಡಂಬರ, ಅಹಂಕಾರ ಪ್ರದರ್ಶನ ಮತ್ತು ಶೋಷಣೆ ಇವುಗಳ ಕೀಳು ಅಲಂಕಾರಗಳನ್ನು ತೊರೆದ ಶುದ್ಧ ಆರ್ಷೇಯವಾದ ಮದುವೆಯ ವಿಧಾನಕ್ಕೂ ಜೀವನ ವಿಧಾನಕ್ಕೂ ಇಂದು ಸಂಕೇತವಾಗಿ ನಿಂತಿರುವ ಇದು, ಈ 'ಮಂತ್ರ ಮಾಂಗಲ್ಯ', ಇನ್ನೂ ಸಹಸ್ರಾರು ಮಂದಿಯ ಜೀವನವನ್ನು ಬೆಳಗಲಿ ಎಂದು ಹಾರೈಸುತ್ತೇನೆ.

## ಮಂತ್ರ ಮಾಂಗಲ್ಯದ ವಿವಾಹ ಸಂಹಿತೆ

### ವಧೂವರರಿಂದ ದಾಂಪತ್ಯ ವ್ರತದ ವಿಧಿ ವಿಧಾನಗಳ ಸ್ವೀಕಾರ.

೧) ಇಲ್ಲಿ ಸಮಾವೇಶಗೊಂಡಿರುವ ದೇವ ಸಮಾನರಾದ ಗುರುಹಿರಿಯರ ಸಾಕ್ಷಿಯಾಗಿ ನಾವಿಂದು ಪತಿ, ಪತ್ನಿಯರಾಗಿ ದಾಂಪತ್ಯ ವ್ರತ ಸ್ವೀಕರಿಸುತ್ತಿದ್ದೇವೆ.

೨) ದಂಪತಿಗಳಾಗುವ ನಾವಿಬ್ಬರು ಮೇಲು ಕೀಳೆನ್ನದೆ ಸರ್ವ ಸಮಾನದಿಂದ ಬಾಳ್ವೆ ನಡೆಸುತ್ತೇವೆ.

೩) ನಮ್ಮ ವೈವಾಹಿಕ ಜೀವನ ಯಾತ್ರೆಯಲ್ಲಿ, ಬರಬಹುದಾದ ಸಹಿಕಹಿಗಳನ್ನು ಸಮಾನವಾಗಿ ಹಂಚಿಕೊಂಡು ಬಾಳುತ್ತೇವೆ.

೪) ಸಮಾಜಕ್ಕಾಗಿ ನಾವು, ನಮಗಾಗಿ ಸಮಾಜ ಎಂಬ ಅರಿವಿನಿಂದ ನಡೆಯುತ್ತೇವೆ.

೫) ಸಮಾಜದಲ್ಲಿ ಬೆಳೆದ ನಾವು, ಸಮಾಜದ ಋಣ ಪರಿಹಾರಕ್ಕೆ ಕೈಲಾದ ಸರ್ವ ನೆರವು ನೀಡುತ್ತೇವೆ.

೬) ದಿನ ನಿತ್ಯದ ಪ್ರಾರಂಭವೇ ಶುಭ ಮುಹೂರ್ತವಾಗಿದ್ದು, ರಾಹುಕಾಲ, ಗುಳಿಕ ಕಾಲ, ಯಮಗಂಡಕಾಲಗಳೆಂದು ವಿಂಗಡಿಸುವ ಅಜ್ಞಾನಿಗಳ ನಿಲುವನ್ನು ತಿರಸ್ಕರಿಸುತ್ತೇವೆ.

೭) ವರದಕ್ಷಿಣೆ, ಕನ್ಯಾಶುಲ್ಕಗಳಂತಹ ಅನಿಷ್ಟ ವಿಧಾನ ವ್ಯವಹಾರಗಳಿಂದ ಮಾತಾ ಪಿತೃಗಳಿಗೆ, ಮದುವೆಯ ದುಂದು ವೆಚ್ಚ ಹೊರೆಯಾಗದಂತೆ ನಮ್ಮ ಪರಿಸರದ ಜನರಿಗೆ ಸರಳ ಮದುವೆ ಆಚರಿಸಲು ಪ್ರೋತ್ಸಾಹಿಸುತ್ತೇವೆ.

೮) ಮದುವೆಯೆಂಬುದು ಪವಿತ್ರತಮ ದೀಕ್ಷೆಯೆಂದು ತಿಳಿದು ವೈವಾಹಿಕ ಜೀವನದಲ್ಲಿ, ಆತ್ಮ ಸಂಯಮದಿಂದ ಬಾಳುವುದೇ ದಿವ್ಯದರ್ಶನ, ಆತ್ಮ ಸಾಕ್ಷಾತ್ಕಾರ, ಸಮಾಜ ಮತ್ತು ದೇಶ ಸೇವೆಯೆ ಮದುವೆಯ ಗುರಿಯೆಂದು ತಿಳಿದು ಬಾಳುತ್ತೇವೆ.

೯) ದಂಪತಿಗಳಾಗಿರುವ ನಾವಿಬ್ಬರು ಇಂದಿನಿಂದ ನಿರ್ಮಲ ಪ್ರೇಮದಿಂದ ಸತ್ಯನಿಷ್ಠರಾಗಿ ಸ್ವತಂತ್ರರಾಗಿ ಜಾತಿಮತಗಳ ಭೇದಮಾಡದೆ, ಸಮಾಜದಲ್ಲಿ ಬಾಳುತ್ತೇವೆ.

೧೦) ರಾಷ್ಟ್ರದ ನಿಯಮದಂತೆ ದಂಪತಿಗಳಿಗೆ ಎರಡೇ ಮಕ್ಕಳಿರಲಿ ಎಂಬ ನಿಯಮಕ್ಕೆ ಬದ್ಧರಾಗಿರುತ್ತೇವೆ.

೧೧) ಏನೇ ಎಡರು ತೊಡರುಗಳು ಬಂದರೂ ಹಿಂದಾಗದೆ ನಮ್ಮ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡುತ್ತೇವೆ.

**ಕುವೆಂಪು ಹೇಳಿದಂತೆ ಮದುವೆ ಮಾಡುವ ವಿಧಾನ:**

ಕಳಸ, ಮಾಂಗಲ್ಯ, ಎರಡು ಪುಷ್ಪಹಾರಗಳು ತಟ್ಟೆಯಲ್ಲಿ ಮಂತ್ರಾಕ್ಷತೆ ಮುಖ್ಯವಾಗಿರಬೇಕು.

* ಮದುಮಕ್ಕಳಿಗೆ ವಿವಾಹ ಸಂಹಿತೆ ಬೋಧನೆ.
* ಮಾಂಗಲ್ಯಕ್ಕೆ ಮದು ಮಕ್ಕಳು ಪೂಜೆ ಸಲ್ಲಿಸಬಹುದು.
* ಈ ಕಾರ್ಯಕ್ರಮದಲ್ಲಿ ಮಾತಾಪಿತೃಗಳು ವೇದಿಕೆಯಲ್ಲಿರತಕ್ಕದ್ದು.
* ವಧುವಿಗೆ ವರನು, ವರನಿಗೆ ವಧುವು ಪುಷ್ಪಹಾರ ಹಾಕಬೇಕು.
* ವರನು ವಧುವಿಗೆ ಕೊರಳಿಗೆ ಮಾಂಗಲ್ಯ ಧಾರಣೆ ಮಾಡುವುದು.
* ಮಾತಾ ಪಿತೃಗಳು ಮಂತ್ರಾಕ್ಷತೆಯನ್ನು ಮದುಮಕ್ಕಳಿಗೆ ಅರ್ಪಿಸಿ ಆಶೀರ್ವದಿಸಿದ ನಂತರ, ತಂದೆ ತಾಯಿಗಳಿಗೆ ವಧೂವರರು ನಮಸ್ಕರಿಸಬೇಕು.
* ಸಭಿಕರು ಸಾಲಾಗಿ ಬಂದು ಮದುಮಕ್ಕಳಿಗೆ ಮಂತ್ರಾಕ್ಷತೆಯಿಂದ ಆಶೀರ್ವದಿಸಬಹುದು.

ಇವಿಷ್ಟೂ ಕುವೆಂಪುರವರ ಮಂತ್ರಮಾಂಗಲ್ಯದ ತತ್ವ ಧೋರಣೆಗಳು ಕುವೆಂಪುರವರು ಮಂತ್ರಮಾಂಗಲ್ಯದ ಮಹತ್ವವನ್ನು ತಿಳಿಸಲು ಯುವ ಸಮುದಾಯಕ್ಕೆ ಕರೆನೀಡಿದ್ದರು. ಅವರು ಯುವಕ ಯುವತಿಯರಿಗೆ "ನೀವು ಲೋಕವನ್ನಾಗಲಿ, ಸಮಾಜವನ್ನಾಗಲಿ, ಪುರೋಹಿತ ಶಾಹಿಯನ್ನಾಗಲೀ ಬದಲಾಯಿಸಲು ಪ್ರಯತ್ನಿಸುವ ಅಗತ್ಯ ಖಂಡಿತ ಇಲ್ಲ, ನೀವು ಮತ್ತು ನಿಮ್ಮ ಮನಸ್ಸು ಪರಿವರ್ತನೆ ಆಗದೆ ಏನೂ ಬದಲಾಗುವುದಿಲ್ಲ. ನಿಮಲ್ಲಿ ಪ್ರಮಾಣಿಕತೆ ಏನಾದರೂ ಇದ್ದರೆ ನಾನು ಹೇಳುವ ಒಂದು ಸಣ್ಣ ಸುಧಾರಣೆ ನಿಮ್ಮ ಜೀವನದಲ್ಲಿ ಮಾಡಿಕೊಳ್ಳಿ. ನಿಮ್ಮ ಮದುವೆಯನ್ನು ನೀವು ವರದಕ್ಷಿಣೆ ತಗೊಳ್ಳದೆ, ಶಾಸ್ತ್ರಚಾರಗಳಿಗೆ ಕಟ್ಟು ಬೀಳದೆ, ನಿಮ್ಮ ಅಂತಸ್ತಿನ ಪ್ರದರ್ಶನ ಮಾಡಲು ದುಂದು ಮಾಡದೆ, ಸರಳವಾಗಿ

ಮದುವೆ ಮಾಡಿಕೊಳ್ಳಿ. ಇದ್ಯಾವ ಮಹಾಕ್ರಾಂತಿ ಎಂದು ನಿಮಗನ್ನಿಸಬಹುದು. ನಿಮ್ಮ ಜೀವನದಲ್ಲಿ ಒಮ್ಮೆಯಾದರೂ ನೀವು ನಂಬಿದ ಆದರ್ಶಗಳ ಮೌಲ್ಯಗಳ ಪರವಾಗಿ ನಿಂತು ಗೊಡ್ಡು ಸಂಪ್ರದಾಯಗಳನ್ನು ಎದುರಿಸಿ ನಾವು ನಂಬಿದ ಆದರ್ಶಗಳ ಪರವಾಗಿ ನಿಲ್ಲುವ ಅದ್ಭುತ ಅನುಭವ, ಆನಂದ ಏನೆಂದಾದರೂ ನಿಮಗೆ ಗೊತ್ತಾಗುತ್ತದೆ. ಆದರ್ಶಗಳು ನಾವು ದಿನಾ ಪಠಣ ಮಾಡಬೇಕಾದ ಗೊಡ್ಡು ಮಂತ್ರಗಳಲ್ಲ. ಅವು ನಮ್ಮ ಜೀವನದ ಉಸಿರು"[೨೧] ಎಂದು ಎಪ್ಪತ್ತರ ದಶಕದಲ್ಲಿಯೇ ಕರೆಕೊಟ್ಟಿದ್ದರು.

ತೇಜಸ್ವಿ ಅವರು ತಂದೆಯ ತತ್ವಾದರ್ಶವನ್ನು ಅನುಸರಿಸಿ ಸರಳ ಮದುವೆಗೆ ಮುಂದಾದರು. ತೇಜಸ್ವಿ ಅವರ ವಿವಾಹಕ್ಕೆ ಕೇವಲ ಮೂವತ್ತಾರು ಮಂದಿ ಮಾತ್ರ ಆಗಮಿಸಿದ್ದರು. ತೇಜಸ್ವಿ ಅವರ ಮದುವೆಯನ್ನು ಸ್ವತ: ಕುವೆಂಪುರವರೇ ಮಾಡಿಸಿದರು. ಕುವೆಂಪು ಹೇಳಿದಂತೆ ವೇದಿಕೆಯ ಮೇಲೆ ಶ್ರೀ ಸೀತಾರಾಮ, ಶ್ರೀ ರಾಮಕೃಷ್ಣ ಪರಮಹಂಸರು, ಶ್ರೀ ಶಾರದಾದೇವಿಯವರ ಭಾವಚಿತ್ರ ಇಟ್ಟು ಒಂದೊಂದೆ ಹೂಮಾಲೆಯಿಂದ ಅಲಂಕರಿಸಿದ್ದರು. ಬಿಳಿ ವಸ್ತ್ರದಾರಿಗಳಾದ ಕುವೆಂಪುರವರು ಮಹಾಮಾತೆಯ ಪಕ್ಕದಲ್ಲಿ ಕುಳಿತರು. ಇನ್ನೊಂದು ಬದಿಯಲ್ಲಿ ತೇಜಸ್ವಿ ಮತ್ತು ರಾಜೇಶ್ವರಿ ಅವರನ್ನು ಕೂರಿಸಲಾಯಿತು. ಕುವೆಂಪುರವರೇ ರಚಿಸಿದ ಮಂತ್ರಮಾಂಗಲ್ಯದ ರೀತಿಯಲ್ಲಿ ಮದುವೆಯನ್ನು ನೆರವೇರಿಸಿದರು.

ಕುವೆಂಪುರವರು ದೇವರಿಗೆ ಮಂಗಳಾರತಿ ಎತ್ತಿ, ಪ್ರಾರ್ಥನೆ ಹೇಳಿ ನಂತರ ಹಾರ ಹಾಕಿಸಿ, ಕುವೆಂಪುರವರ ಸೂಚನೆಯಂತೆ ತೇಜಸ್ವಿ ರಾಜೇಶ್ವರಿಯವರಿಗೆ ತಾಳಿಕಟ್ಟಿ ಒಂದು ಉಂಗುರವನ್ನು ತೊಡಿಸಿದರು. ಕಾಲುಂಗಾರವನ್ನು ಕಾಲಿನ ಬೆರಳಿಗೆ ತೊಡಿಸಿದರು. ರಾಜೇಶ್ವರಿ ಮಾತ್ರ ಕುವೆಂಪು ಮತ್ತು ಇತರರ ಆಶೀರ್ವಾದ ಪಡೆದರು.

---

[೨೧] ಅಣ್ಣನ ನೆನಪು – ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಪು.ಸಂ. ೨೩೨, ೨೩೩

ಈ ಪದ್ಧತಿಯಲ್ಲಿ ನಂಬಿಕೆ ಇಲ್ಲದ ತೇಜಸ್ವಿ ಅವರ ಪಕ್ಕದಲ್ಲಿ ನಿಂತಿದ್ದರು. ಯಾವ ಸದ್ದುಗದ್ದಲವಿಲ್ಲದೆ, ಯಾವ ಆಡಂಬರವಿಲ್ಲದೆ, ಪ್ರಕೃತಿ ಮಧ್ಯೆ ಮದುವೆ ನಡೆದಿತ್ತು.

ಮದುವೆ ಸಮಾರಂಭಗಳಲ್ಲಿ ಸಾಮಾನ್ಯವಾಗಿ ಸಿಹಿ ಊಟವೇ ಪ್ರಧಾನವಾಗಿರುತ್ತದೆ. ಆದರೆ ತೇಜಸ್ವಿ ಅವರು ಅದರಲ್ಲೂ ಬದಲಾವಣೆ ತರಬೇಕೆಂದು ಅಂದಿನ ದಿನ ಅಂದರೆ ಅವರ ಮದುವೆಯ ದಿನ ಮಾಂಸಹಾರ ಅಡುಗೆಯನ್ನೇ ಮಾಡಿಸಿದ್ದರು.

ತೇಜಸ್ವಿ ಅವರ ಮದುವೆಯ ಇನ್ನೊಂದು ವಿಶೇಷ ಸಂಗತಿ ಎಂದರೆ ಮದುವೆಯ ಆಹ್ವಾನ ಪತ್ರಿಕೆ. ತೇಜಸ್ವಿ ಕುವೆಂಪು ಕೈ ಬರಹದಲ್ಲಿ ಲಗ್ನ ಪತ್ರಿಕೆ ಬರೆಸಿ, ಇನ್‌ಲ್ಯಾಂಡ್‌ನಲ್ಲಿ ಅಚ್ಚುಹಾಕಿಸಿ ಮದುವೆ ದಿನವೇ ಅದು ತಲುಪುವಂತೆ ಪೋಸ್ಟ್ ಮೂಲಕ ಆ ದಿನವೇ ಅಂದರೆ ಮದುವೆ ದಿನವೇ ಪತ್ರ ತಲುಪುವ ಹೊಸ ಆಲೋಚನೆ ಮಾಡಿದ್ದರು.

ತೇಜಸ್ವಿ ಅವರ ಮದುವೆಯ ಆಹ್ವಾನ ಪತ್ರಿಕೆ ಕುವೆಂಪು ದಂಪತಿಗಳು ತಮ್ಮ ಮಗನ ಮದುವೆಗೆ ಆಹ್ವಾನಿಸುತ್ತಿರುವಂತೆ ರಚಿಸಲ್ಪಟ್ಟಿದೆ. ಆ ಪತ್ರಿಕೆ ಈ ರೀತಿ ಇದೆ.

ಶ್ರೀ

"ಚಿತ್ರಕೂಟ"
ದಿನಾಂಕ:೨೭/೧೧/೧೯೬೬
ಗೋಣಿಬೀಡು ಅಂಚೆ,
ಚಿಕ್ಕಮಗಳೂರು ಜಿಲ್ಲೆ.

ಶ್ರೀಯುತ/ಶ್ರೀಮತಿ

ತಾವೆಲ್ಲರೂ ಕ್ಷೇಮ ಎಂದು ಹಾರೈಸುತ್ತೇವೆ. ಈ ಕಾಗದ ಬರೆಯುತ್ತಿರುವ ವಿಶೇಷ ಕಾರಣ ಏನೆಂದರೆ, ನಮ್ಮ ಜ್ಯೇಷ್ಠಪುತ್ರ ಚಿರಂಜೀವಿ ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಎಂ.ಎ. ಮತ್ತು ದಿವಂಗತ ಶ್ರೀ ರಂಗಪ್ಪನವರ ಪುತ್ರಿ ಕುಮಾರಿ ಆರ್.ರಾಜೇಶ್ವರಿ ಎಂ.ಎ. ಇವರಿಗೆ ದಿನಾಂಕ:೨೭.೧೧.೧೯೬೬ ರಂದು "ಚಿತ್ರಕೂಟ" ದಲ್ಲಿ ಮದುವೆ ನಡೆಯುತ್ತದೆ. ನಮ್ಮ ಹಿತೈಷಿಗಳಾದ ತಾವು ತಮಗೆ ಅನುಕೂಲ, ವಿರಾಮ ದೊರೆತಾಗ "ಚಿತ್ರಕೂಟ" ಕ್ಕೆ ಆಗಮಿಸಿ, ವಧೂವರರ ಆತಿಥ್ಯ ಸ್ವೀಕರಿಸಿ, ಅವರನ್ನು ಆಶೀರ್ವದಿಸಿ, ಅವರ ಶ್ರೇಯೋಭಿವೃದ್ಧಿ ಕೋರಬೇಕೆಂದು ವಿಜ್ಞಾಪಿಸಿ ಕೊಳ್ಳುತ್ತೇವೆ."[೨೨]

ಇತಿ
ಕುವೆಂಪು ದಂಪತಿ

[೨೨] ನನ್ನ ತೇಜಸ್ವಿ – ರಾಜೇಶ್ವರಿ ತೇಜಸ್ವಿ ಪು.ಸಂ. ೧೬೮

ತೇಜಸ್ವಿ ಅವರು ತಮ್ಮ ಧ್ಯೇಯ ಧೋರಣೆಯಂತೆ ಜೀವನ ಸಾಗಿಸಿದವರು, ಅವರ ಮದುವೆ ಒಂದು ಉದಾಹರಣೆ ಅಷ್ಟೇ. ತೇಜಸ್ವಿ ಒಬ್ಬ ಸಮಾಜ ಸುಧಾರಕರು, ಕ್ರಾಂತಿಕಾರಿಗಳು, ಕಂದಾಚಾರಗಳನ್ನು ಧಿಕ್ಕರಿಸಿ, ಆಡಂಬರ, ಅಹಂಕಾರ ಪ್ರದರ್ಶನ, ವರದಕ್ಷಿಣೆ, ಜಾತಿ ಪದ್ಧತಿ, ಅನಿಷ್ಟ ಮೂಢನಂಬಿಕೆಗಳನ್ನು ತೊರೆದು ಸರಳ ವಿವಾಹವಾದವರು. ಇದು ಎಲ್ಲರಿಗೂ ಸ್ಫೂರ್ತಿದಾಯಕ.

ತೇಜಸ್ವಿ ಅವರಿಂದ ಪ್ರಾರಂಭವಾದ ಸರಳ ವಿವಾಹ ಪದ್ಧತಿಯನ್ನು ಅನುಸರಿಸಿ, ಕುವೆಂಪು ಅವರ ಮನೆಯ ಎಲ್ಲಾ ಮದುವೆಗಳು ಸರಳ ವಿವಾಹ ರೀತಿಯಲ್ಲೇ ಜರುಗಿದವು.

ತೇಜಸ್ವಿ ಮಹಾನ್ ಸಾಹಿತಿ ಕುವೆಂಪುರವರ ಮಗ, ತಂದೆಯಂತೆ ಶ್ರೇಷ್ಠ ಸಾಹಿತಿ, ತೇಜಸ್ವಿ ತಂದೆ ಹೇಳಿದಂತ ತತ್ವ ವಿಶ್ವ ಮಾನವನಾಗಿ ಹೊರಹೊಮ್ಮಿದರು. ಯಾವುದೇ ಜಾತಿ, ಧರ್ಮಗಳಿಗೆ, ಮತಮಾನ್ಯಗಳಿಗೆ ಕಟ್ಟು ಬೀಳದೆ ವಿಶ್ವ ಮಾನವರಾದರು ತೇಜಸ್ವಿ.

**ಕುವೆಂಪುರವರ ವಿಶ್ವಮಾನವ ಸಂದೇಶ**

**ಪಂಚ ಮಂತ್ರ :**

೧) ಪ್ರತಿಯೊಂದು ಮಗುವೂ ಹುಟ್ಟುತ್ತಲೆ ವಿಶ್ವಮಾನವ, ಬೆಳೆಯುತ್ತಾ ನಾವು ಅದನ್ನು ಅಲ್ಪಮಾನವನನ್ನಾಗಿ ಮಾಡುತ್ತೇವೆ. ಮತ್ತೆ ಅದನ್ನು ವಿಶ್ವಮಾನವನನ್ನಾಗಿ ಮಾಡುವುದೇ ವಿದ್ಯೆಯ ಕರ್ತವ್ಯವಾಗಬೇಕು.

೨) ಹುಟ್ಟುವಾಗ ವಿಶ್ವಮಾನವನಾಗಿಯೇ ಹುಟ್ಟಿದ ಮಗುವನ್ನು ನಾವು ದೇಶ, ಭಾಷೆ, ಮತ, ಜಾತಿ, ಜನಾಂಗ, ವರ್ಣ ಇತ್ಯಾದಿ ಉಪಾಧಿಗಳಿಂದ

ಬದ್ಧನನ್ನಾಗಿ ಮಾಡುತ್ತೇವೆ. ಅವೆಲ್ಲವುಗಳಿಂದ ಪಾರಾಗಿ ಅವನನ್ನು ಬುದ್ಧನನ್ನಾಗಿ ಪರಿವರ್ತಿಸುವುದೇ ನಮ್ಮ ವಿದ್ಯೆ ಸಂಸ್ಕೃತಿ, ನಾಗರೀಕತೆ ಎಲ್ಲದರ ಆದ್ಯ ಕರ್ತವ್ಯವಾಗಬೇಕು. ಪ್ರಪಂಚದ ಮಕ್ಕಳೆಲ್ಲ ಅನಿಕೇತನರಾಗಬೇಕು. ಲೋಕ ಉಳಿದು ಬಾಳಿ ಬದುಕ ಬೇಕಾದರೆ!

೩) ಮಾನವನ ವಿಕಾಸದ ಹಾದಿಯಲ್ಲಿ ಆಯಾ ಕಾಲದ ಅಗತ್ಯವನ್ನು ಪೂರೈಸಲು ಮಹಾಪುರುಷರು ಸಂಭವಿಸಿ ಹೋಗಿದ್ದಾರೆ ಅವರಲ್ಲಿ ಕೆಲವರ ವಾಣಿ ವಿಶಿಷ್ಟ ಧರ್ಮವಾಗಿ ರೂಪುಗೊಂಡು ಕಡೆಗೆ ಮತವಾಗಿ ಪರಿಮಿತವಾಯಿತು. ಮಾನವರನ್ನು ಕೂಡಿಸಿ ಬಾಳಿಸಬೇಕೆಂಬ ಸದುದ್ದೇಶದಿಂದ ಹುಟ್ಟಿಕೊಂಡ ಮಹಾತ್ಮರ ವಾಣಿ ಮತವಾಗಿ ಮಾದಕವಾಯಿತು. ಒಂದು ಯುಗಕ್ಕೆ ಅಗತ್ಯವೆನ್ನಿಸಿದ ಧರ್ಮ ಕಾಲಾನುಕಾಲಕ್ಕೆ ಮತವಾಗಿ ನಿರುಪಯುಕ್ತವೆನಿಸಿ ಮತ್ತೊಂದು ಹೊಸಧರ್ಮಕ್ಕೆ ಎಡೆಗೊಟ್ಟುದೂ ಉಂಟು ಹೀಗಾಗಿ ಅನೇಕ ಧರ್ಮಗಳು ಮತಗಳಾಗಿ ಜನತೆಯನ್ನು ಗುಂಪು ಗುಂಪಾಗಿ ಒಡೆದಿವೆ. ಯುದ್ಧಗಳನ್ನು ಹೊತ್ತಿಸಿವೆ. ಜಗತ್ತಿನ ಕ್ಷೋಭೆಗಳಿಗೆಲ್ಲ ಮೂಲಕಾರಣವೆಂಬಂತೆ ವಿಜ್ಞಾನ ಯುಗದ ಪ್ರಾಯೋಗಿಕ ದೃಷ್ಟಿಗೆ ಇನ್ನು ಮೇಲೆ ಮತ ಮೌಢ್ಯದ ಒಪ್ಪಿಗೆಯಾಗದು ವಿನೋಬಾ ಭಾವೆಯವರು ಹಿಂದೆ ಹೇಳಿದಂತೆ ಮತ ಮತ್ತು ರಾಜಕೀಯದ ಕಾಲ ಆಗಿ ಹೋಯಿತು. ಇನ್ನೇನಿದ್ದರೂ ಆಧ್ಯಾತ್ಮ ಮತ್ತು ವಿಜ್ಞಾನದ ಕಾಲ ಬರಬೇಕಾಗಿದೆ.

೪) ಮನುಜ ಮತ, ವಿಶ್ವಪಥ, ಸರ್ವೋದಯ, ಸಮನ್ವಯ, ಪೂರ್ಣ ದೃಷ್ಟಿ, ಈ ಪಂಚಮಂತ್ರ ಇನ್ನು ಮುಂದಿನ ದೃಷ್ಟಿಯಾಗಬೇಕಾಗಿದೆ ಅಂದರೆ ನಮಗೆ ಇನ್ನು ಬೇಕಾದುದು ಆ ಮತ, ಈ ಮತ ಅಲ್ಲ, 'ಮನುಜಮತ'. ಆ ಪಥ ಈ ಪಥ ಅಲ್ಲ, 'ವಿಶ್ವಪಥ'. ಆ ಒಬ್ಬರ ಉದಯ ಮಾತ್ರವಲ್ಲ, ಸರ್ವರ ಸರ್ವಸ್ತರದ ಉದಯ ಪರಸ್ಪರ ವಿಮುಖವಾಗಿ ಸಿಡಿದು ಹೋಗುವುದಲ್ಲ,

ಸಮನ್ವಯಗೊಳ್ಳುವುದು, ಮಿತಮತದ ಆಂಶಿಕ ದೃಷ್ಟಿಯಲ್ಲ; ಭೌತಿಕ ಪಾರಮಾರ್ಥಿಕ ಎಂಬ ಭಿನ್ನದೃಷ್ಟಿಯಲ್ಲ, ಎಲ್ಲವನ್ನೂ ಭಗವದ್ ದೃಷ್ಟಿಯಿಂದ ಕಾಣುವ ಪೂರ್ಣದೃಷ್ಟಿ.

೫) ಯಾವ ಭಾವನೆಗಳು ಜಗತ್ತಿನಲ್ಲಿ ಎಲ್ಲ ಮಾನವರಿಗೂ ಅನ್ವಯವಾಗಬಹುದೊ ಅಂತಹ ಭಾವನೆ ಅಂತಹ ದೃಷ್ಟಿ ಬರಿಯ ಯಾವುದೋ ಒಂದು ಜಾತಿಗೆ, ಮತಕ್ಕೆ, ಗುಂಪಿಗೆ, ಒಂದು ದೇಶಕ್ಕೆ ಮಾತ್ರ ಅನ್ವಯವಾಗುವುದಿಲ್ಲ. ಸರ್ವಕಾಲಕ್ಕೂ ಅನ್ವಯವಾಗುವ ಇವು ಮೂಲ ಮೌಲ್ಯಗಳು. ಈ ಮೌಲ್ಯಗಳು ಮಾನವರನ್ನು ಕೂಡಿಸಿ ಬಾಳಿಸುವತ್ತ ನಡೆದಾವು. ಗುಂಪುಗಾರಿಕೆಗೆಂದೂ ಇವು ತೊಡಗುವುದಿಲ್ಲ; ಅದೇನಿದ್ದರೂ ರಾಜಕಿಯದ ಕರ್ಮ, ವ್ಯಕ್ತಿ ಸ್ವಾತಂತ್ರ್ಯವನ್ನು ನೀಡಿಯೂ ಸಮಷ್ಟಿಯ ಉದ್ಧಾರದ ದೃಷ್ಟಿ ಇದರದು. ಈ ದೃಷ್ಟಿಗೆ ವ್ಯಕ್ತಿಗಳೆಷ್ಟೋ ಅಷ್ಟೂ ವ್ಯಕ್ತಿಗಳು ಸಮಷ್ಟಿಯ ವಿಕಾಸಕ್ಕೆ ಸಾಧಕವಾಗುವುದೂ ಸಾಧ್ಯ. ಈ 'ದರ್ಶನ'ವನ್ನೆ ವಿಶ್ವಮಾನವ ಗೀತೆ ಸಾರುತ್ತದೆ.

## ವಿಶ್ವ ಮಾನವ ಗೀತೆ

ಓ ನನ್ನ ಚೇತನ
ಆಗು ನೀ ಅನಿಕೇತನ!

ರೂಪ ರೂಪಗಳನು ದಾಟಿ
ನಾಮಕೋಟಿಗಳನು ಮೀಟಿ
ಎದೆಯ ಬಿರಿಯೆ ಭಾವದೀಟಿ
ಓ ನನ್ನ ಚೇತನ

ನೂರು ಮತದ ಹೊಟ್ಟ ತೂರಿ,
ಎಲ್ಲ ತತ್ತ್ವದಲ್ಲೆ ಮೀರಿ
ನಿರ್ದಿಗಂತವಾಗಿ ಏರಿ,
ಓ ನನ್ನ ಚೇತನ

ಎಲ್ಲಿಯೂ ನಿಲ್ಲದಿರು;
ಮನೆಯನೆಂದೂ ಕಟ್ಟದಿರು;
ಕೊನೆಯನೆಂದೂ ಮುಟ್ಟದಿರು
ಓ ಅನಂತವಾಗಿರು!
ಓ ನನ್ನ ಚೇತನ

ಅನಂತ ತಾನ್ ಅನಂತವಾಗಿ
ಆಗುತಿಹನೆ ನಿತ್ಯಯೋಗಿ
ಅನಂತ ನೀ ಅನಂತವಾಗು;
ಆಗು, ಆಗು, ಆಗು, ಆಗು,
ಓ ನನ್ನ ಚೇತನ

ಕುವೆಂಪು

ವಿಶ್ವ ಮಾನವ ಗೀತೆ, ವಿಶ್ವಮಾನವ ಸಂದೇಶ ತಿಳಿಸುವಂತೆ, ತೇಜಸ್ವಿ ಅವರು ಯಾವುದೇ ಜಾತಿ, ಮತ, ಕುಲ, ಗೋತ್ರ, ಭಾಷೆ, ದೇಶಗಳಿಗೆ ಅಂಟಿಕೊಳ್ಳದೆ ಹಾಗೂ ಅವುಗಳಿಗೆ ಸೇರಿರುವ ಭ್ರಮೆಗಳನ್ನು ಹೊಂದದೆ ಯಾವುದೇ ಮಾನಸಿಕ ಗೋಡೆಗಳನ್ನು ಕಟ್ಟಿಕೊಂಡು ಅದರಲ್ಲಿ ಉಳಿಯದೆ, ವಿಶ್ವ ಮಾನವನಾಗಿ

ಹೊರಹೊಮ್ಮಿದ ವ್ಯಕ್ತಿ. ಕುವೆಂಪು ರವರು ಅವರ ಧೋರಣೆಯನ್ನು ಮಕ್ಕಳ ಮೇಲೆ ಏರಿದರು ಅಂತಲ್ಲ. ತೇಜಸ್ವಿ ಅವರ ಧೋರಣೆಗಳಿಗೂ ಕುವೆಂಪು ಅವರ ಧೋರಣೆಗಳಿಗೂ ಮೂಲಭೂತ ವ್ಯತ್ಯಾಸಗಳಿವೆ.

ತೇಜಸ್ವಿ ಅವರು ಇದನ್ನು ಸ್ಪಷ್ಟವಾಗಿ ಹೇಳಿದ್ದಾರೆ. "ಅಣ್ಣನ ಜೊತೆ ತತ್ವ ವಿವೇಚನೆ ಮಾಡುತ್ತಿದ್ದಾಗಲೆಲ್ಲ ಒಂದು ಸಾರಿಯೂ ತಮ್ಮ ನಂಬಿಕೆ ಚಿಂತನೆಗಳನ್ನು ನನ್ನ ಹತ್ತಿರ ಪ್ರತಿಪಾದಿಸಲಿಲ್ಲ. ತಮ್ಮ ಧೋರಣೆಯನ್ನು ಮತ್ತೊಬ್ಬರ ಮೇಲೆ ಹೇರುವುದಂತೂ ಅಣ್ಣನ ಜಾಯಮಾನದಲ್ಲೇ ಇರಲಿಲ್ಲ. ಹಾಗಾಗಿ ಅಣ್ಣನ ನಿಲುವಿಗೂ ನನ್ನ ನಿಲುವಿಗೂ ಅನೇಕ ಮೂಲಭೂತ ವ್ಯತ್ಯಾಸಗಳು ತಲೆದೋರಿದವು. ಅಣ್ಣನಿಗೆ ಭಾರತೀಯ ದರ್ಶನಗಳಲ್ಲಿದ್ದ ಶ್ರದ್ಧೆ, ಹಿಂದೂ ಧರ್ಮವನ್ನು ಸುಧಾರಿಸಬಹುದು ಎನ್ನುವ ನಂಬಿಕೆ ನನ್ನಲ್ಲಿ ಇರಲಿಲ್ಲ. ಭಾರತದಲ್ಲಿ ಹಿಂದೂ ಧರ್ಮದ ಯಾವುದೇ ಆವೃತ್ತಿಯನ್ನು ನೀವು ಪ್ರತಿಪಾದನೆಯಲ್ಲೇ ಪರ್ಯಾವಸಾನವಾಗುತ್ತದೆ ಎಂದು ನನಗನ್ನಿಸತೊಡಗಿತು. ಬುದ್ಧ, ಬಸವಣ್ಣ, ರಾಜರಾಮ್ ಮೋಹನ್‌ರಾಯ್, ವಿವೇಕಾನಂದ, ಅಂಬೇಡ್ಕರ್ ಎಲ್ಲರ ಪ್ರಯತ್ನಗಳೂ ಹಿಂದೂ ಧರ್ಮದ ಮೂಲ ಸ್ವರೂಪದಲ್ಲಿ ಗಣನೀಯ ಪರಿವರ್ತನೆಯನ್ನೇನೂ ಮಾಡಲಾಗದೆ ನೀರಿನಲ್ಲಿ ಮಾಡಿದ ಹೋಮವಾಗಿರುವುದನ್ನು ಉದಾಹರಿಸಿ ಅಣ್ಣನ ಬಳಿ ನಾನು ಎಷ್ಟೋ ಸಾರಿ ವಾದಿಸಿದ್ದೇನೆ"[೨೩].

ಕುವೆಂಪುರವರು "ಮೊದಲೆಲ್ಲಾ ಭಾರತದ ಉಪನಿಷದ್ದರ್ಶನಗಳನ್ನು ಪ್ರತಿಪಾದಿಸುತ್ತಿದ್ದವರು ವಿಶ್ವಮಾನವ ಸಂದೇಶ ಬರೆಯುವ ಹೊತ್ತಿಗೆ, ಎಲ್ಲಾ ಸಾಂಸ್ಥಿಕ ಧರ್ಮಗಳನ್ನೂ ತಿರಸ್ಕರಿಸಬೇಕು, ವ್ಯಕ್ತಿಗತ ಆಧ್ಯಾತ್ಮ ಒಂದೇ ವೈಯಕ್ತಿಕ ಧರ್ಮವಾಗಿ ಉಳಿಯಬೇಕು ಎನ್ನುವ ನಿಲುವಿಗೆ ಬಂದರು"[೨೪]

---

[೨೩] ಅಣ್ಣನ ನೆನಪು – ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಪು.ಸಂ. ೨೧೮
[೨೪] ಅಣ್ಣನ ನೆನಪು – ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಪು.ಸಂ. ೨೧೮

## ವಿಶ್ವ ಮಾನವ ಸಂದೇಶದ ಸಪ್ತಸೂತ್ರಗಳು

೧) 'ಮನುಷ್ಯ ಜಾತಿ ತಾನೊಂದರೆ ವಲಂ' ಎಂಬುದನ್ನು ನಿರುಪಾಧಿಕವಾಗಿ ಸ್ವೀಕರಿಸಬೇಕು.

೨) ವರ್ಣಾಶ್ರಮವನ್ನು ತಿದ್ದುವುದಲ್ಲ, ಅದನ್ನು ಸಂಪೂರ್ಣವಾಗಿ ತೊಲಗಿಸಬೇಕು. ಅಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಅಂತ್ಯಜ, ಷಿಯಾ, ಸುನ್ನಿ, ಕ್ಯಾಥೋಲಿಕ್, ಪ್ರಾಟೆಸ್ಟಂಟ್, ಸಿಖ್, ನಿರಂಕಾರಿ ಇತ್ಯಾದಿ ವಿಭಜನೆಯನ್ನು ನಿರ್ನಾಮ ಮಾಡಬೇಕು.

೩) ಎಲ್ಲ ದೇಶಗಳಲ್ಲಿ ಮತ್ತು ಎಲ್ಲ ಮತಗಳಲ್ಲಿರುವ ಜಾತಿ ಪದ್ಧತಿಯನ್ನು ಸಂಪೂರ್ಣವಾಗಿ ನಿರಾಕರಿಸಿ ವಿನಾಶಗೊಳಿಸಬೇಕು.

೪) ಮತ ತೊಲಗಿ ಆಧ್ಯಾತ್ಮ ಮಾತ್ರ ವೈಜ್ಞಾನಿಕ ತತ್ವವಾಗಿ ಮಾನ್ಯತೆ ಪಡೆಯಬೇಕು.

೫) ಮತ ಮನುಜಮತವಾಗಬೇಕು, ಪಥ ವಿಶ್ವಪಥವಾಗಬೇಕು, ಮನುಷ್ಯ ವಿಶ್ವ ಮಾನವ ನಾಗಬೇಕು.

೬) ಮತ ಗುಂಪುಕಟ್ಟುವ ವಿಷಯವಾಗಬಾರದು, ಯಾರೂ ಯಾವ ಒಂದು ಮತಕ್ಕೂ ಸೇರದೆ, ಪ್ರತಿಯೊಬ್ಬನೂ ತಾನು ಕಂಡುಕೊಳ್ಳುವ ತನ್ನ ಮತಕ್ಕೆ ಮಾತ್ರ ಸೇರಬೇಕು. ಅಂದರೆ ಜಗತ್ತಿನಲ್ಲಿ ಎಷ್ಟು ವ್ಯಕ್ತಿಗಳಿದ್ದಾರೋ ಅಷ್ಟೇ ಸಂಖ್ಯೆಯ ಮತಗಳಿರುವಂತಾಗುತ್ತದೆ. ಯಾರೊಬ್ಬರೂ ಇನ್ನೊಬ್ಬರ ಮತಕ್ಕೆ ಸೇರಿ ಗುಂಪುಕಟ್ಟಿ ಜಗಳ ಹಚ್ಚುವಂತಾಗಬಾರದು.

೭) ಯಾವ ಒಂದು ಗ್ರಂಥವೂ 'ಏಕೈಕ ಪರಮಪೂಜ್ಯ' ಧರ್ಮ ಗ್ರಂಥವಾಗಬಾರದು ಪ್ರತಿಯೊಬ್ಬ ವ್ಯಕ್ತಿಯೂ ತನಗೆ ಸಾಧ್ಯವಾದವುಗಳನ್ನೆಲ್ಲ ಓದಿ ತಿಳಿದು ತನ್ನ ದರ್ಶನವನ್ನು ತಾನೆ ನಿರ್ಣಯಿಸಿ ಕಟ್ಟಿಕೊಳ್ಳಬೇಕು.

ಮಹಾನ್ ಸಾಹಿತಿಯ ಮಗ ತಂದೆಯಂತೆ ಶ್ರೇಷ್ಠ ಸಾಹಿತಿಯಾಗಿರುವುದು ಜಗತ್ತಿನಲ್ಲಿ ಎಲ್ಲೂ ಕಂಡು ಬರುವುದಿಲ್ಲ. ಅದಕ್ಕೆ ಅಪವಾದ ಕುವೆಂಪು ಮತ್ತು ಪೂರ್ಣಚಂದ್ರ ತೇಜಸ್ವಿ ಅವರು ತೇಜಸ್ವಿ ಅಪ್ಪನ ಪ್ರಭಾವಕ್ಕೆ ಒಳಗಾಗದೆ ಸ್ವತಂತ್ರ್ಯವಾಗಿ ಜೀವಿಸಿದವರು. ಅಷ್ಟೇ ಅಲ್ಲದೆ ಕುವೆಂಪುರವರ 'ಮಂತ್ರ ಮಾಂಗಲ್ಯ' ಮತ್ತು 'ವಿಶ್ವಮಾನವ ಸಂದೇಶ'ವನ್ನು ಅನುಸರಿಸಿ ಸರಳವಾಗಿ ಬದುಕಿದಂತವರು. ಜಾತಿ, ಧರ್ಮಗಳ ಎಲ್ಲೆಯನ್ನು ಮೀರಿದವರು. ಮೌಢ್ಯಗಳನ್ನು ಬದಿಗೊತ್ತಿ ಬಾಳಿದಂತವರು. ಕುವೆಂಪು ರವರ ಸಂದೇಶವನ್ನು ಜೀವನ ಪರ್ಯಂತ ಅನುಸರಿಸಿದ ಧೀಮಂತ ವ್ಯಕ್ತಿತ್ವ ತೇಜಸ್ವಿ ಅವರದ್ದು.

ತೇಜಸ್ವಿ ಅವರು ಒಂದು ಸಂದರ್ಶನದಲ್ಲಿ ಕುವೆಂಪು ಅವರ ಪ್ರಭಾವ ನಿಮ್ಮ ಮೇಲಾಗಿದೆ ಎಂಬ ಪ್ರಶ್ನೆಗೆ ಅವರು ಉತ್ತರಿಸಿದ ರೀತಿ ಇದು "ಹುಟ್ಟಿದ ಮಗು ಕಣ್ಣು ಬಿಟ್ಟಕೂಡಲೇ ಕಾಣೋದು ತಂದೆ-ತಾಯಿಯನ್ನ ಅವರ ಮೂಲಕ ವಿಶ್ವವನ್ನು ನೋಡುತ್ತದೆ ಹೊರತು ಅದು ಪ್ರಭಾವ ಅಲ್ಲ. ಯಾರದೆ ಪ್ರಭಾವಕ್ಕೊಳಗಾಗಬೇಕು ಅಥವಾ ದೂರ ಇರಬೇಕು ಎಂದು ನಾನು ಅಂದುಕೊಂಡಿಲ್ಲ. ನನ್ನ ಪಾಡಿಗೆ ನಾನಿರಲು ಪ್ರಯತ್ನಿಸುತ್ತೇನೆ"[೨೫] ಎಂದು ಕುವೆಂಪು ಪ್ರಭಾವದ ಬಗ್ಗೆ ಅವರ ನುಡಿಗಳಿವು.

[೨೫] ಹೊಸ ವಿಚಾರಗಳು – ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಪು.ಸಂ. ೫೧೫

ಒಬ್ಬರ ಆಸ್ತಿಕರು, ಇನ್ನೊಬ್ಬರು ನಾಸ್ತಿಕರು, ಇಬ್ಬರೂ ಅಂದರೆ ತೇಜಸ್ವಿ ಮತ್ತು ಕುವೆಂಪು, ಸತ್ಯಾರ್ಥಿಗಳು ಇಬ್ಬರೂ ಬದುಕನ್ನು ಅರ್ಥ ಪೂರ್ಣವಾಗಿಸಿಕೊಂಡವರು.



ಕುವೆಂಪುರವರು ಸ್ವತ: ಪೂಜೆ ಮಾಡುತ್ತಿದ್ದರು ಅವರು ಉಪನಿಷತ್ತಿನ ಮಂತ್ರಗಳು, ದೇವಿಸ್ತೋತ್ರ, ಭಗವದ್ಗೀತೆಯ ಕೆಲವು ಭಾಗಗಳು ಇವನ್ನೇಲ್ಲಾ ಹೇಳಿಕೊಂಡು ಪೂಜೆ ಮಾಡುತ್ತಿದ್ದರು. ಕುವೆಂಪು ಪೂಜೆ ಮಾಡುವ ದೇವರ ಮನೆಯಲ್ಲಿ "ನಮ್ಮ ದೇವರ ಮನೆಯಲ್ಲಿ ಹಲವಾರು ದೇವರ ವಿಗ್ರಹಗಳಿದ್ದುವು. ಒಂದು ಶ್ರೀ ರಾಮಕೃಷ್ಣ ಪರಮಹಂಸರ ಫೋಟೋ, ಅಕ್ಕ ಪಕ್ಕ ಶಾರದಾದೇವಿ, ವಿವೇಕಾನಂದರ ಫೋಟೋಗಳು, ಮೇಲೊಂದು ಸ್ವಾಮಿ ಶಿವಾನಂದರ ದೊಡ್ಡ ತೈಲಚಿತ್ರ. ಇವರೇ ಅಣ್ಣನಿಗೆ ದೀಕ್ಷೆ ಕೊಟ್ಟ ರಾಮಕೃಷ್ಣ ಪರಮಹಂಸರ ನೇರ ಶಿಷ್ಯರೆಂದು ಮೊನ್ನೆ ರಾಮಕೃಷ್ಣಾಶ್ರಮದವರೊಬ್ಬರು ಹೇಳಿದರು. ನನಗೆ ಈ ಫೋಟೋ ಯಾರದೆಂದು ಆವರೆಗೂ ಗೊತ್ತಿರಲಿಲ್ಲ. ಅಣ್ಣನೂ ಈ ವಿಚಾರ ನಮಗೆ ಹೇಳಿರಲಿಲ್ಲ. ಆ ಫೋಟೋಗಳ ಕೆಳಗೆ ಶಿವ ಪಾರ್ವತಿ, ಲಕ್ಷ್ಮಿ ಸರಸ್ವತಿ, ರಾಮ, ಸೀತೆ, ಲಕ್ಷ್ಮಣ, ಹನುಮಂತ ಇತ್ಯಾದಿ"[೨೬] ವಿಗ್ರಹಗಳಿದ್ದವು ಎಂದು ಹೇಳಿದ್ದಾರೆ.

ಕುವೆಂಪು ಆಸ್ತಿಕರಾಗಿದ್ದರೂ ಕೂಡ ಕಂದಾಚಾರ, ಬೂಟಾಟಿಕೆ, ಆತ್ಮವಂಚನೆಗಳನ್ನು ನಂಬುತ್ತಿರಲಿಲ್ಲ. ಆದರೆ ತೇಜಸ್ವಿ ಈ ಸಂಪ್ರದಾಯಗಳಿಂದಲೂ ಕೂಡ ಸ್ವತಂತ್ರ್ಯರಾದರು. ತೇಜಸ್ವಿ ತಮ್ಮ ಬದುಕನ್ನು ರೂಪಿಸಿಕೊಂಡ ನಂತರ ತಮ್ಮ ಮನೆಯಲ್ಲಿ ಯಾವುದೇ ದೇವರ ಮನೆ ನಿರ್ಮಿಸಲಿಲ್ಲ ಯಾವ ಹಬ್ಬ ಆಚರಣೆಗಳನ್ನು ಮಾಡಲಿಲ್ಲ. ಹಬ್ಬ-ಹರಿದಿನಗಳಲ್ಲಿ ಸಿಹಿ ಮಾಡುವುದು ಸಾಮಾನ್ಯ ಆದರೆ ಆ ಕಟ್ಟನ್ನು ಮುರಿದು ತೇಜಸ್ವಿ ಅಂದು ಮಾಂಸಾಹಾರವನ್ನು ಮಾಡಿಸುತ್ತಿದ್ದರು.

---

[೨೬] ಅಣ್ಣನ ನೆನಪು – ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಪು.ಸಂ. ೩೧

ತೇಜಸ್ವಿ ತಮ್ಮ ನಾಸ್ತಿಕತೆಯನ್ನು ಬೇರೆಯವರ ಮೇಲೆ ಏರಲಿಲ್ಲ ಅವರ ಪತ್ನಿ ರಾಜೇಶ್ವರಿಯವರಿಗೆ ಅವರಿಚ್ಚೆಯಂತೆ ಪೂಜೆ ಮಾಡುವ ಅಥವಾ ಬಿಡುವ ಪೂರ್ಣ ಸ್ವಾತಂತ್ರ್ಯವಿತ್ತು. ರಾಜೇಶ್ವರಿಯವರು ನಮಗೆ ಮಕ್ಕಳು ಹುಟ್ಟಿದ ಮೇಲೆಯೇ ಹಬ್ಬಗಳನ್ನು ಮಾಡಲು ಶುರು ಮಾಡಿದೆವು ಎಂಬ ಮಾತನ್ನು ಹೇಳುತ್ತಾರೆ.

# ಅಧ್ಯಾಯ-೬

## ಹೊಸ ತಲೆಮಾರಿಗೆ ತೇಜಸ್ವಿ ಅವರ ಜೀವನದ ಮಾದರಿ.

# ಅಧ್ಯಾಯ-೬

## ಹೊಸ ತಲೆಮಾರಿಗೆ ತೇಜಸ್ವಿ ಅವರ ಜೀವನದ ಮಾದರಿ.

ತೇಜಸ್ವಿಯವರು ಬರೀ ಚಿಂತಕರಾಗಿ ಸಾಹಿತ್ಯಕಾರರಾಗಿದ್ದರೆ ಕನ್ನಡ ನಾಡಿನ ಜನತೆ ಇಷ್ಟು ಗೌರವಿಸುವ ಅಗತ್ಯವಿರಲಿಲ್ಲ. ಅವರು ಹೋರಾಟಗಾರರು ಕೀರ್ತಿ ಶನಿತೊಲಗಾಚೆ ಎಂದವರು ತಮಗಿಷ್ಟದಂತೆ ಬದುಕಿದ ಛಲದವರೂ ಆಗಿದ್ದರಿಂದ ಅವರ ಬರಹ ಭಾಷೆಗೆ ಹೊಸ ಹೊಳಪು ಇರುತ್ತಿತ್ತು. ಎಂಥ ಸಣ್ಣ ಘಟನೆಗಳನ್ನು ಕೂಡ ರೋಚಕವಾಗಿ ಚಿತ್ರಿಸುವ ಮೂಲಕ ವಿಚಾರಗಳನ್ನು ಮೆಲುಕು ಹಾಕುವಂತೆ ಮಾಡುತ್ತಿದ್ದರು.

ತೇಜಸ್ವಿ ಒಬ್ಬ ಲೇಖಕನಾಗಿ ಸಾಹಿತ್ಯ ಕೃಷಿಗೆ ಮಾತ್ರ ಸೀಮಿತಗೊಳ್ಳದೆ ತಮ್ಮ ಬಹುಮುಖವಾದ ಪ್ರತಿಭಾಸಂಪತ್ತಿನ ಮೂಲಕ ಹಲವಾರು ಕ್ಷೇತ್ರಗಳಲ್ಲಿ ಆಸಕ್ತಿ ತಳೆದಿರುವುದು, ನಿರಂತರವಾಗಿ ಅಂಥ ಕ್ಷೇತ್ರಗಳಲ್ಲಿ ದುಡಿಯುತ್ತಾ ಬಂದಿರುವುದು ಅವರ ಒಂದು ವೈಶಿಷ್ಟ್ಯ. ಅವರು ಸದಾ ಹೊಸದನ್ನು ಕಾಣುವ ತವಕದಲ್ಲಿರುವವರು, ಅನ್ವೇಷಣಶೀಲರು; ಅಷ್ಟೇ ಅಲ್ಲ ತೇಜಸ್ವಿ ವಿಚಾರವಾದಿಗಳು, ಪ್ರತಿಭಟನಾಕಾರರೂ ಹೌದು. ಅವರ ಉತ್ಸಾಹಶೀಲವಾದ ಮನಸ್ಸು ಕುಂಚ ಮತ್ತು ಕ್ಯಾಮರಾ ಎರಡನ್ನೂ ಹಿಡಿದಿದೆ. ಕಂಪ್ಯೂಟರಿನಂಥ ಆಧುನಿಕ ತಂತ್ರಜ್ಞಾನವನ್ನು ಕೂಡ ಅವರು ತಮ್ಮ ಸಾಹಿತ್ಯ ರಚನೆಗಾಗಿ, ಚಿತ್ರಕಲಾವಿನ್ಯಾಸಗಳಿಗಾಗಿ, ಬಳಸಿಕೊಂಡವರು. ವಿಶೇಷವಾದ ಸಾಮಾಜಿಕ ಕಾಳಜಿಯನ್ನು ಹೊಂದಿರುವವರು.

ತೇಜಸ್ವಿ ಮನುಷ್ಯರ ನಿಗೂಢತೆಯನ್ನು ಕೆಳಸ್ತರದ ಲಘುಹಾಸ್ಯದ ಮೂಲಕ ಬೆರಗಿನಲ್ಲಿ ಬಯಲುಗೊಳಿಸಿರುವ ಅವರ ಸೃಜನಶೀಲತೆ ಹಲವಾರು ಚಿಂತನೆಗಳಿಗೆ ದಾರಿ ಮಾಡಿಕೊಟ್ಟಿದೆ. "ತೇಜಸ್ವಿ ಕೇವಲ ಕಾದಂಬರಿಕಾರರೋ, ಕತೆಗಾರರೋ ಅಲ್ಲ.

ಅವರು ಇತ್ತೀಚಿನ ಕಾಲಮಾನದಲ್ಲಿ ನಮ್ಮ ದೇಶಕಂಡಿರುವ ಅಪೂರ್ವ ಸಮರ್ಥ ಕ್ರಿಯಾಶೀಲ ಸಂಯೋಜಕ ಕಲಾವಿದರು. ಅಂದರೆ, ಚಿತ್ರಕಲೆ, ಛಾಯಾಗ್ರಹಣ, ಪರಿಸರ, ಸಂಗೀತ, ಸಾಮಾಜಿಕ ಚಿಂತನೆ, ಭಾಷಾನೀತಿ, ಶಿಕ್ಷಣ ಅಲೆಮಾರಿ ಸಾಹಸ ಹಾಗೂ ವಿಜ್ಞಾನದ ನಿಗೂಢಗಳಿಗೆ ಕೈ ಹಚ್ಚಿ ಅನಂತ ವಿಸ್ತಾರಗಳನ್ನು ಶೋಧನಾತ್ಮಕ ನೋಟದಿಂದ ಕಥಿಸಿದ ಕ್ರಮದಿಂದ ಅವರು ಕನ್ನಡ ಸಂಸ್ಕೃತಿಯಲ್ಲಿ ವಿಶಿಷ್ಟರು."[೨೭]

ತೇಜಸ್ವಿಯ ವಿಚಾರಗಳು, ಚಿಂತನೆಗಳು, ಅವರ ಸರಳತೆ, ಅವರ ಬಹುಮುಖಿ ಪ್ರತಿಭೆ, ಯಾವುದನ್ನೆ ಆಗಲಿ ಅತಿ ಉತ್ಸಾಹದಿಂದ ಬೆರಗಿನಿಂದ ನೋಡುತ್ತಿದ್ದ ರೀತಿ ಇಂದಿನ ಯುವ ಜನಾಂಗಕ್ಕೆ ಸ್ಫೂರ್ತಿಯಾಗಬೇಕು. ಯುವ ಬರಹಗಾರರಿಗೆ ತೇಜಸ್ವಿಯವರು ಯಾವ ರೀತಿ ಬರವಣಿಗೆ ಮಾಡಬೇಕು, ಯಾವ ವಿಷಯಗಳನ್ನು ಅಳವಡಿಸಿಕೊಳ್ಳಬೇಕು, ಭಾಷೆಯ ಕಲೆಗಾರಿಕೆ ಹೇಗಿರಬೇಕು ಎಂಬುದರ ಬಗ್ಗೆ 'ಸಂಗತಿಯಾದ ಕಥೆಗಳು' ಮುನ್ನುಡಿಯಲ್ಲಿ ಪ್ರಸ್ತಾಪಿಸಿದ್ದಾರೆ. "ನಮ್ಮ ಯುವ ಬರಹಗಾರರು ತಮ್ಮ ಧ್ಯೇಯಾದರ್ಶಗಳನ್ನೂ, ಭಾವೋದ್ವೇಗಗಳನ್ನು ಕಲಾಕೃತಿಗಳಲ್ಲಿ ಅಭಿವ್ಯಕ್ತಿಸುವ ಉದ್ದೇಶವನ್ನು ತೊರೆದು ಭಾಷೆಯಲ್ಲಿ ಕಲೆಗಾರಿಕೆಯನ್ನು ಸಾಧಿಸುವ ಮಟ್ಟಿಗೆ ಮಾತ್ರ ಏಕಾಗ್ರತೆ ಇಟ್ಟುಕೊಳ್ಳುವುದು ಒಳ್ಳೆಯದು. ಸಾಹಿತ್ಯಕ್ಕೆ ಆದರ್ಶಗಳೂ, ಹೊಣೆಗಾರಿಕೆಯೂ, ಕ್ರಾಂತಿಕಾರಕತೆಯೂ ಅಗತ್ಯವಿರಬಹುದು. ಆದರೆ ಬರಹಗಾರರು ಕಲಾಸೃಷ್ಟಿಯಲ್ಲಿ ತೊಡಗಿದಾಗ ಮಾತ್ರ ಕೇವಲ ಭಾಷೆಯ ಕಲಾತ್ಮಕ ಉಪಯೋಗದ ಬಗ್ಗೆ ಮಾತ್ರ ಎಚ್ಚರಿರಬೇಕೆಂದೂ ಸದ್ಯದ ನನ್ನ ಅನಿಸಿಕೆ. ಬರಹಗಾರರು ಮಿಕ್ಕೆಲ್ಲಾ ಧ್ಯೇಯಾದರ್ಶಗಳನ್ನು ಕ್ರಾಂತಿಕಾರತೆಯನ್ನು ನಮ್ಮ ವಾಸ್ತವ ಜೀವನದಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಬೇಕು"[೨೮]

ಯುವ ಬಹರಗಾರರ ಬಗ್ಗೆ ಅತಿ ಕಾಳಜಿ ಹೊಂದಿದ್ದ ತೇಜಸ್ವಿ ಅವರು ಅವರಲ್ಲಿ ಆತ್ಮವಿಶ್ವಾಸ ತುಂಬಿ ಬರವಣಿಗೆಗೆ ಪ್ರಚೋದಿಸಿದರೆ ಅದರಿಂದ ಹೊಸ

[೨೭] ತೇಜಸ್ವಿ ನೆನಪು – ಸಂಪಾದಕರು ಬಿ. ಚಂದ್ರೇಗೌಡ ಬಿ.ಎಲ್. ರಾಜು ಪು.ಸಂ. ೧೩

[೨೮] ಹೊಸ ವಿಚಾರಗಳು – ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಪು.ಸಂ. ೩೧೩

ಪ್ರತಿಭೆಗಳು ಬರಬಹುದು ಎಂಬ ನಂಬಿಕೆ ಇಟ್ಟುಕೊಂಡಿದ್ದರು. ಇದು ಬರಿ ಸಾಹಿತಿಗಳ ಕೆಲಸವಲ್ಲ ಇಂದಿನ ಪತ್ರಿಕಾ ಮಾಧ್ಯಮದ ಜವಾಬ್ದಾರಿ ಕೂಡ ಎಂದು ಹೇಳಿದವರು. ತೇಜಸ್ವಿಯವರು ಪತ್ರಿಕಾ ಸಂಪಾದಕರಿಗೆ ಬರೆದ ಪತ್ರದಲ್ಲಿ ಯುವ ಬರಹಗಾರರ ಬಗ್ಗೆ "ಎಲ್ಲಕ್ಕಿಂತ ಪತ್ರಿಕಾ ಮಾಧ್ಯಮಕ್ಕೆ ಇವತ್ತು ಇರುವ ಗುರುತರ ಜವಾಬ್ದಾರಿ ಎಂದರೆ ನಮ್ಮ ಯುವ ಬರಹಗಾರರಲ್ಲಿ ಬರೆದೇ ಬದುಕಬಹುದು ಎನ್ನುವ ನಂಬಿಕೆ ಹುಟ್ಟಿಸುವುದು. ಬುದ್ಧಿವಂತರೂ ಸಾಹಸಿಗಳೂ ಆದ ಯುವಕರು, ನಮ್ಮಲ್ಲಿನ ಅತ್ಯುತ್ತಮ ಪ್ರತಿಭೆ ಸಾಹಿತ್ಯ ಕ್ಷೇತ್ರಕ್ಕೆ ಬರಲು ಸಾಧನವಾಗುತ್ತದೆ. ಇವರಲ್ಲಿ ಎಲ್ಲರೂ ಮಹಾನ್ ಸಾಹಿತಿಗಳಾಗದೆ ಹೋಗಬಹುದು. ಆದರೆ ಪತ್ರಿಕಾ ರಂಗದಲ್ಲಿ ಒಳ್ಳೆಯ ಕೆಲಸ ಮಾಡಲು ಮಹಾನ್ ಸಾಹಿತಿಯೇ ಆಗಬೇಕಾದ ಅಗತ್ಯ ಇಲ್ಲ. ವರದಕ್ಷಿಣೆ, ಲಂಚ, ಅಥವಾ ವಿದೇಶಗಳಿಗೆ ಹೋಗಲು ವೀಸಾಗಳಿಗೆ ಹುಡುಕಿಕೊಂಡು ತಿರುಗುತ್ತಿರುವ ಯುವ ಜನಾಂಗಕ್ಕೆ ಬರವಣಿಗೆಯ ಸಾಹಸಮಯ ಬದುಕನ್ನು ತೋರಿಸುವಂತಾದರೂ ಅದು ನಮ್ಮ ಪತ್ರಿಕೆಗಳ ಮಹಾತ್ ಸಾಧನೆಯಾಗುತ್ತದೆ"[೨೯] ಎಂದು ಹೇಳಿದ್ದಾರೆ.

ನಮ್ಮ ಇಂದಿನ ಪಠ್ಯ ಪುಸ್ತಕಗಳ ಬಗ್ಗೆ ತೀವ್ರ ಅಸಮಧಾನವಿದ್ದ ತೇಜಸ್ವಿ ಅವರು ಇಂದು ಇಂಗ್ಲೀಷ್ ಮಾಧ್ಯಮಕ್ಕೆ ಏಕೆ ನೂಕು ನುಗ್ಗಲು ಎಂಬುದನ್ನು ಅರಿತಿದ್ದರು. ನಮ್ಮ ವಿಜ್ಞಾನದ ಪಠ್ಯಪುಸ್ತಕಗಳ ಬಗ್ಗೆ "ವೈಜ್ಞಾನಿಕ ವಿಷಯಗಳಲ್ಲಿ ಭಾಷಾ ಮಾಧ್ಯಮವು ತೀರಾ ಗೌಣ ಪಾತ್ರ ವಹಿಸುತ್ತದೆ. ಪಾರಿಭಾಷಿಕ ಪದಗಳನ್ನು ವಿಕಾರವಾಗಿ ತರ್ಜುಮೆ ಮಾಡದೆ ಉಳಿಸಿಕೊಂಡರೆ ಮಾಧ್ಯಮ ಬದಲಾವಣೆಯಾದರೆ ವಿದ್ಯಾರ್ಥಿಗೆ ಅಷ್ಟೊಂದು ತೊಂದರೆ ಆಗಲೇಕೂಡದು. ಪಠ್ಯಪುಸ್ತಕ ಸಮಿತಿ ಸದಸ್ಯರು ತಮ್ಮ ಭಾಷಾಂತರ ಪಾಂಡಿತ್ಯವನ್ನೆಲ್ಲಾ ಈ ಅಂತರರಾಷ್ಟ್ರೀಯ ಪಾರಿಭಾಷಿಕ ಪದಗಳ ಮೇಲೆ ತೋರಿಸಿ ವಿದ್ಯಾರ್ಥಿಗಳ ದಫನ್ ಮಾಡಿದ್ದಾರೆ. ಕನ್ನಡಿಗರಿಗೆ ಚೆನ್ನಾಗಿ

[೨೯] ಹೊಸ ವಿಚಾರಗಳು – ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಪು.ಸಂ. ೩೧೧

ಗೊತ್ತಿರುವ ಪಾರಿಭಾಷಿಕ ಪದಗಳನ್ನು ತೆಗೆದು ಹಾಕಿ ಅಪರಿಚಿತ ಸಂಸ್ಕೃತ ಶಬ್ಧಗಳನ್ನು ತುಂಬಿ ಕನ್ನಡದ ಉದ್ಧಾರ ಮಾಡಿದ್ದಾರೆ. ಅದಕ್ಕೆ ಇವತ್ತು ಇಂಗ್ಲೀಷ್ ಮಾಧ್ಯಮಕ್ಕೆ ನೂಕುನುಗ್ಗಲು. ಇದನ್ನೇ ಬಳಸಿಕೊಂಡು ಭಾಷಾ ಅಲ್ಪ ಸಂಖ್ಯಾತರು ಇಂಗ್ಲೀಷ್ ಮಾಧ್ಯಮದ ಶಾಲೆಗಳಿಗೆ ಒತ್ತಾಯ ತರುತ್ತಿದ್ದಾರೆ”[೩೦] ಎಂಬ ಅಭಿಪ್ರಾಯ ಹೊಂದಿದ್ದರು.

ತೇಜಸ್ವಿರವರು ಸಾಮಾಜಿಕ ಚಳುವಳಿ, ಕನ್ನಡ ಹೋರಾಟ, ವರದಕ್ಷಿಣೆಗೆ ವಿರೋಧ, ಸರಳ ಮದುವೆ ಇತ್ಯಾದಿ ಹೋರಾಟಗಳಲ್ಲಿ ತೊಡಗಿಸಿಕೊಂಡವರು. ರಾಷ್ಟ್ರೀಯ ನೈತಿಕ ಅಧಃಪತನದಿಂದಾಗಿ ಈಗಿನ ಯುವ ಜನತೆಯಲ್ಲಿ ಇಂತಹ ಸಮಸ್ಯೆಗಳ ಬಗ್ಗೆ ಕಾಳಜಿ ಕಾಣುತ್ತಿಲ್ಲ. ವರದಕ್ಷಿಣೆ, ಅದ್ದೂರಿ ಮದುವೆಗಳ ಮೋಹವನ್ನು ತೊರೆಯುವಂತೆ ಕುವೆಂಪುರವರ ‘ಮಂತ್ರ ಮಾಂಗಲ್ಯದ’ ಮೂಲಕ ಕರೆ ನೀಡಿದರು. ತಾವೇ ಸರಳ ವಿವಾಹ ಮಾಡಿಕೊಂಡು ಅದ್ದೂರಿ ಸಾಂಪ್ರದಾಯಿಕ ಪದ್ಧತಿಗಳ ಬಗ್ಗೆ ಹೋರಾಡಿದವರು.

“ಮದುವೆ ಎನ್ನುವುದು ಸಮುದಾಯದ ಸಾಮಾಜಿಕ ಕ್ರಿಯೆಯಾದ್ದರಿಂದಲೇ ಯುವಕರು ತಮ್ಮ ಹಿರಿಯರ ಕೈಯಲ್ಲಿ ನಿಸ್ಸಹಾಯಕರಾಗಿ ಸಿಕ್ಕಿಬಿದ್ದು, ಶರಣಾಗಬೇಕಾಗಿದೆ. ಅವರು ಹೇಳಿಹೇಳಿದ ಶಾಸ್ತ್ರಗಳಿಗೆಲ್ಲಾ ತಲೆ ಬಗ್ಗಿಸಿ, ಕಂಡಕಂಡವರ ಕಾಲಿಗೆಲ್ಲಾ ಬಿದ್ದು, ಪೇಟ, ಬಾಸಿಂಗ ಕಟ್ಟಿಸಿಕೊಂಡು, ಕೈಯಲ್ಲಿ ಬೆಂಡಿನ ಗಿಲಗಿಚ್ಚಿ ಹಿಡಿದುಕೊಂಡು ನಾಟಕದ ನಕಲಿಯವರಂತೆ ಓಡಾಡುವ ಯುವವಧೂವರರು ಇನ್ನೆಂದೂ ಸುಧಾರಣೆಯ ಉಸಿರೆತ್ತದಂತೆ ಮಾನಸಿಕವಾಗಿ ಪರಿವರ್ತನೆಯಾಗುತ್ತಾರೆ. ತಮ್ಮ ತತ್ವ ಆದರ್ಶಗಳನ್ನು ತಮ್ಮ ತಂದೆ, ತಾಯಿ ಅಣ್ಣ ತಮ್ಮಂದಿರಿಗೆ ಸಹ ಮನವರಿಕೆ ಮಾಡಿ ಕೊಡಲಾಗದಷ್ಟು ಅಶಕ್ತರಾದ ಇವರ

---

[30] ಹೊಸ ವಿಚಾರಗಳು – ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಪು.ಸಂ. ೩೧೯

ಧ್ಯೇಯಗಳು ಭಾರತವನ್ನು ಎಂದಾದರೂ ಬದಲಿಸುತ್ತವೆಯೇ?"[೩೧] ಎಂದು ಇಂದಿನ ಯುವಕರ ಬಗ್ಗೆ ಅವರ ಧ್ಯೇಯ-ಧೋರಣೆ ಬದಲಾವಣೆ ಬಗ್ಗೆ ಚಿಂತಿಸುತ್ತಿದ್ದರು. ಯುವಕರಿಗೆ 'ಸರಳ ವಿವಾಹ' ವನ್ನು ಪರಿಪಾಲಿಸಿ ಇದರಿಂದ ದೇಶ ತಂತಾನೇ ಬದಲಾಗುತ್ತದೆ ಎಂದು ಹೇಳಿದವರು. ಇವರ ಈ ತತ್ವಗಳನ್ನು ಯುವಕರು ಅಳವಡಿಸಿಕೊಳ್ಳಬೇಕು.

'ಆಡುಮುಟ್ಟದ ಸೊಪ್ಪಿಲ್ಲ' ಎನ್ನುವಂತೆ ತೇಜಸ್ವಿ ಎಲ್ಲಾ ಕ್ಷೇತ್ರಗಳಲ್ಲೂ ತಮ್ಮ ಪ್ರತಿಭೆ ಮೆರೆದಂತವರು. ಯಾವ ಕೆಲಸವನ್ನೇ ಆಗಲಿ ಆಸಕ್ತಿಯಿಂದ, ಶ್ರದ್ಧೆಯಿಂದ ಮಾಡಿದರೆ ಅದು ಪರಿಪೂರ್ಣವಾಗಿ ದಕ್ಕುತ್ತದೆ ಎನ್ನುವುದಕ್ಕೆ ತೇಜಸ್ವಿ ಉದಾಹರಣೆ. ಯಾವ ಕೆಲಸವೂ ಕೀಳಲ್ಲ ಎಂಬ ಭಾವನೆ ಬೆಳೆಸಿದವರು. ತೇಜಸ್ವಿ ಅವರಿಗೆ ಮೀನಿಗೆ ಗಾಳ ಹಾಕುವುದು ಅವರ ನೆಚ್ಚಿನ ಹವ್ಯಾಸ ಆದರೆ ಭಾರತದಲ್ಲಿ ಇದಕ್ಕೆ ಯಾವುದೇ ರೀತಿಯ ಸ್ಥಾನಮಾನವೂ ಇಲ್ಲ ಮೀನು ಹಿಡಿಯುವವರು ಕೆಳವರ್ಗದವರು ಎಂಬುದನ್ನು ನಮ್ಮ ಜಾತಿಪದ್ಧತಿಯೇ ಹೇಳುತ್ತದೆ. ನಮ್ಮ ಜಾತಿಪದ್ಧತಿಯೇ ಮನುಷ್ಯರನ್ನು ಪ್ರತ್ಯೇಕಿಸುತ್ತಾ ಹಲವಾರು ಅನುಭವಗಳನ್ನು ನಮ್ಮಲ್ಲಿರುವ ಜಾತಿ ಪದ್ಧತಿ ಕಿತ್ತುಕೊಂಡಿದೆ. ಈ ಜಾತಿ ಪದ್ಧತಿ ಸಮಾಜದಲ್ಲಿ ಅಂತರ ಸೃಷ್ಟಿಸಿದೆ, ಜಾತಿ ಸಂಘರ್ಷಗಳಿಗೆ ಕಾರಣವಾಗಿದೆ. ಇದನ್ನು ತೊಲಗಿಸಬೇಕು. ವಿಶ್ವಪಥದತ್ತ ಹೆಜ್ಜೆ ಹಾಕಬೇಕು ಎಂದು ತಿಳಿಹೇಳಿದವರು.

ಭಾರತೀಯ ಸಂಸ್ಕೃತಿಯಿಂದಾಗಿ ಎಷ್ಟೊ ಅನುಭವಗಳು ನಶಿಸಿ ಹೋಗಿವೆ ಎಂಬುದಕ್ಕೆ ತೇಜಸ್ವಿ ಅದ್ಭುತ ಉದಾಹರಣೆ ನೀಡುತ್ತಾರೆ. "ನಾನೂ ನನ್ನ ಗೆಳೆಯರೂ ಗಾಳ ಹಿಡಿದು ತಿರುಗುತ್ತಿದ್ದಾಗ ಇತರರೆಲ್ಲ ಅರ್ಧ ತಿರಸ್ಕಾರ ಅರ್ಧ ಔದಾಸೀನ್ಯದಲ್ಲಿ ನಮ್ಮತ್ತ ನೋಡುತ್ತಿದ್ದರು. ಪಾಶ್ಚಿಮಾತ್ಯ ಸಂಸ್ಕೃತಿಯಲ್ಲಿ ಗಾಳ ಹಾಕುವುದನ್ನು ಅಮೋಘ ಕುಶಲ ಕಲೆಯನ್ನಾಗಿ ರೂಪಿಸಿದ್ದಾರೆ. ನಮ್ಮಲ್ಲಿ ಕ್ರಿಕೆಟ್ ಎಷ್ಟು

---

[31] ಹೊಸ ವಿಚಾರಗಳು – ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಪು.ಸಂ. ೩೧೯

ಜನಪ್ರಿಯವೋ ಅಷ್ಟೇ ಇದು ಪಶ್ಚಿಮದಲ್ಲಿ ಜನಪ್ರಿಯ. ಮೀನು ಹಿಡಿಯುವ ಕೋಲುಗಳೇ ಸಾವಿರಾರು ರೂಪಾಯಿ ಬೆಲೆ ಬಾಳುವ ಫೈಬರ್ ಗ್ಲಾಸ್, ಗ್ರಾಫೈಟ್ ಮೊದಲಾದ ವಸ್ತುಗಳಿಂದ ತಯಾರಿಸಿರುತ್ತಾರೆ. ಕೋಟ್ಯಾಂತರ ರೂಪಾಯಿ ಬಹುಮಾನಗಳ ಟೂರ್ನಮೆಂಟುಗಳನ್ನು ಪ್ರತಿ ವರ್ಷ ನಡೆಸುತ್ತಾರೆ. ಇಷ್ಟರಮಟ್ಟಿಗೆ ವಿಕಾಸವಾಗಿರುವ, 'ಹೆಮ್ಮಿಂಗ್ ವೇ' ಯ 'ಓಲ್ಡ್‌ಮ್ಯಾನ್ ಅಂಡ್‌ದಿ ಸೀ' ಯಂಥ ಅದ್ಭುತ ಕೃತಿ ಹೊರಬರಲು ಕಾರಣವಾದ ಈ ಹವ್ಯಾಸ ಭಾರತದಲ್ಲಿ ಮಾತ್ರ ನಮ್ಮ ಸಂಸ್ಕೃತಿಯ ಅಂಗವಾಗಿ ವಿಕಾಸವಾಗಲೇ ಇಲ್ಲ. ಇದನ್ನು ನಾವೂ ಅನುಕರಿಸಿ ನಕಲಿ ಮಾಡಬೇಕೆಂದೇನೂ ನಾನು ಹೇಳುತ್ತಿಲ್ಲ. ಜಾತಿ ಪದ್ಧತಿ ಹೇಗೆ ನಮ್ಮ ಸಮಾಜದಲ್ಲಿ ಮನುಷ್ಯರನ್ನು ಪರಸ್ಪರ ಪ್ರತ್ಯೇಕಿಸುತ್ತಾ ಇದೆ ಎಂದು ವಿವರಿಸಲು ಮಾತ್ರ ಹೇಳುತ್ತಿದ್ದೇನೆ. ಮೀನು ಹಿಡಿಯುವುದು ಅತ್ಯಂತ ಕೀಳು ಜಾತಿಯ ಸಿಳ್ಳೆಕ್ಯಾತರ ಕುಲಕಸುಬಾದ್ದರಿಂದ ಮೀನು ಹಿಡಿಯಲು ಹೊಳೆದಂಡೆಗೆ ಹೋಗುವುದು ಹಿಂದೂ ಧರ್ಮಕ್ಕೆ ಹೊಲಗೇರಿಯೊಳಗೆ ಹೋಗುವುದಕ್ಕಿಂತಲೂ ಕೀಳು ಕೆಲಸ"[೩೨] ಎಂದಿದ್ದರು. ಜಾತಿ ಪದ್ಧತಿಯಿಂದ ಉಂಟಾದ ಸಾಮಾಜಿಕ, ಆರ್ಥಿಕ, ರಾಜಕೀಯ ಕಂದರಗಳನ್ನು ಕಾನೂನು ಪರಿವರ್ತನೆ ಮಾಡಿ ವಿಧಾನವಾಗಿಯಾದರೂ ಮುಚ್ಚಬಹುದು. ಆದರೆ ಸಾಂಸ್ಕೃತಿಕ ಕಣ್ಣಿಗೆ ಕಾಣದ ಕಂದರವನ್ನು ಮುಚ್ಚಲು ಕಷ್ಟಪಡಬೇಕಾಗುತ್ತದೆ.

ತೇಜಸ್ವಿ ಅವರಿಗೆ ಮೀನು ಶಿಕಾರಿಯ ಬಗ್ಗೆ ಬಾಲಕನಾಗಿದ್ದಾಗಲೇ ಆಸಕ್ತಿ ಹೆಚ್ಚು. ಈ ಅಂಶವನ್ನು ತಾರಿಣಿರವರು ಬರೆದಿದ್ದಾರೆ. "ತೇಜಸ್ವಿ ಮೀನು ಹಿಡಿಯುವುದರಲ್ಲಿ ಮಗ್ನನಾಗಿದ್ದ. ಅವನು ಎಸೆದ ಮೀನುಗಳನ್ನು ಹೆರಕಿ ಬಟ್ಟೆಗಂಟಿಗೆ ಸೇರಿಸಿ, ಮತ್ತೆ ನಾನು ಅವನ ಕಡೆಯೇ ಕಾತರದಿಂದ ನೋಡುತ್ತಾ ನಿಂತಿದ್ದೆ

---

[೩೨] ವಿಮರ್ಶೆಯ ವಿಮರ್ಶೆ – ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಪು.ಸಂ. ೧೧೧

ಯಾರಿಗೂ ಸಮಯದ ಪರಿವೆಯೇ ಇಲ್ಲ. ಬಿಸಿಲಿಗೆ ನೆತ್ತಿ ಚುರುಗುಟ್ಟುತ್ತಿತ್ತು. ಮನೆ ಬಿಟ್ಟದ್ದು ಬೆಳಿಗ್ಗೆ ೮ ಗಂಟೆಗೆ ಯಾರ ಕೈಯಲ್ಲೂ ಗಡಿಯಾರವಿಲ್ಲ".[೩೩]

ತೇಜಸ್ವಿಯವರು ಮೀನು ಹಿಡಿಯುತ್ತಿದ್ದುದ್ದು ಮಾಂಸಕ್ಕಾಗಿಯಲ್ಲ! ಮಾಂಸವನ್ನು ಬೇಕಾದರೆ ದುಡ್ಡಿಗೆ ಕೊಂಡುಕೊಳ್ಳಬಹುದು ಮೀನು ಹಿಡಿಯುವ ಕಲೆಯನ್ನು ಕೊಂಡುಕೊಳ್ಳಲಾಗುವುದಿಲ್ಲ. ಅದನ್ನು ಮಾಡುತ್ತಲೇ ಅಭಿವೃದ್ಧಿ ಪಡಿಸಬೇಕು ಎಂದವರು ವಾದಿಸುತ್ತಿದ್ದರು. ಮೀನು ಹಿಡಿಯುವ ಕೆಲಸವೆಂದರೇ ಒಂದು ರೀತಿಯ ಧ್ಯಾನವಿದ್ದಂತೆ. ಗಂಟೆಗಟ್ಟಲೆ ದಡದಲ್ಲಿ ಏಕಾಂತವಾಗಿ ಕುಳಿತುಕೊಳ್ಳಬೇಕು. ಅವರು ದಡದಲ್ಲಿ ಕುಳಿತರೂ ಅವರ ಮನಸ್ಸು ಮಾತ್ರ ನೀರಿನ ಒಳಗಡೆ ಹುಡುಕುತ್ತಿತ್ತು. ಅವರ ಈ ಚಟುವಟಿಕೆ ಎಲ್ಲೂ ಸರಿಯಾಗಿ ದಾಖಲಾಗಲೇ ಇಲ್ಲ.

ತೇಜಸ್ವಿ ಅವರಿಗೆ ಫೋಟೊಗ್ರಫಿಯಲ್ಲಿ ತುಂಬಾ ಆಸಕ್ತಿ ಇತ್ತು. ಅವರು ತಮ್ಮ ಕಾಲೇಜು ದಿನದಿಂದಲೇ ಇದರ ಅಭ್ಯಾಸದಲ್ಲಿ ತೊಡಗಿದ್ದರು. ಈ ಅಭ್ಯಾಸವೇ ಮುಂದೆ ವಿವಿಧ ಹಕ್ಕಿಗಳ ಛಾಯಚಿತ್ರಗಳನ್ನು ತೆಗೆಯಲು, ಹಕ್ಕಿಗಳ ಜೀವನ ರೀತಿಯನ್ನು ಅರಿಯಲು ಸಹಾಯವಾಯಿತು. ತೇಜಸ್ವಿ ಫೋಟೋಗ್ರಫಿಯ ಬಗ್ಗೆ "ಫೋಟೋಗ್ರಫಿ ನನ್ನ ಬರವಣಿಗೆಗೆ ಹಲವು ಅಸಾಧಾರಣ ಶಿಸ್ತು ಸಂಯಮಗಳನ್ನು ಕಲಿಸಿತೆಂದು ಅನ್ನಿಸುತ್ತದೆ. ಫೋಟೋಗ್ರಫಿಯನ್ನು ಗಂಭೀರ ಕಲಾಭಿವ್ಯಕ್ತಿ ಎಂದು ಪರಿಗಣಿಸಿದವನು. ಆ ಕಲಾಮಾಧ್ಯಮದ ಒಂದು ಅಂಶವನ್ನು ಗಮನಿಸಿರಬಹುದು. ಅದರಲ್ಲಿ ಎಂದೂ ಕಲಾವಿದ ಕಥಾನಾಯಕನಾಗಲು ಸಾಧ್ಯವಿಲ್ಲ. ಏಕೆಂದರೆ ಅದರಲ್ಲಿ ಕಲಾವಿದ ಕ್ಯಾಮರಾದ ಹಿಂದೆಯೇ ಇರುವುದು ಅನಿವಾರ್ಯ. ಒಂದು ದೃಶ್ಯವನ್ನೋ ಘಟನೆಯನ್ನೋ ಪರಿಸರವನ್ನೋ ವ್ಯಾಖ್ಯಾನಿಸುವಲ್ಲಿ ಮಾತ್ರ ಕಲಾವಿದನ ವ್ಯಕ್ತಿತ್ವ

---

[೩೩] ಮಗಳು ಕಂಡ ಕುವೆಂಪು – ತಾರಿಣಿ ಚಿದಾನಂದ ಪು.ಸಂ. ೨೦೮

ಇರುತ್ತದೆಯೇ ಹೊರತು ಅವನೆಂದೂ ಪಾತ್ರಧಾರಿಯಾಗಿ ಆ ಕಲಾಕೃತಿಯ ನಾಯಕನಾಗಲು ಸಾಧ್ಯವಿಲ್ಲ".[೩೪]

ತೇಜಸ್ವಿ ಅವರು ವನ್ಯ ಜೀವಿಗಳ ಬಗ್ಗೆ, ವೈಜ್ಞಾನಿಕವಾಗಿ ಮತ್ತು ಸರಳವಾಗಿ ಎಲ್ಲರಿಗೂ ಅರ್ಥವಾಗುವಂತೆ ವಿವರಿಸಬಲ್ಲವರಾಗಿದ್ದರು. ವನ್ಯ ಜೀವಿ ತಜ್ಞರು ಮತ್ತು ಮುಂತಾದವರೆಲ್ಲ ಕೇವಲ ಒಂದೊಂದು ವರ್ಗದ, ಕ್ಷೇತ್ರದ ಜನರನ್ನು ತಲುಪುವುದಕ್ಕೆ ಸಾಧ್ಯವಾಗುತ್ತದೆ. ಆದರೆ ತೇಜಸ್ವಿ ಎಲ್ಲರಿಗೂ ತಲುಪಿದರು.

ತೇಜಸ್ವಿ ತಮ್ಮ ಮಗಳಿಗೆ ಫೋಟೋಗ್ರಫಿ ಬಗ್ಗೆ ತಿಳುವಳಿಕೆ ನೀಡಿರುವ ನುಡಿಗಳಿವು. "ಅವರಿವರನ್ನು ನಿಲ್ಲಿಸಿ ಫೋಟೋಗಳನ್ನು ತೆಗೆಯುತ್ತಾ ಅದನ್ನೇ ಫೋಟೋಗ್ರಫಿ ಎಂದು ತಿಳಿಯುವುದನ್ನು ನಿಲ್ಲಿಸಬೇಕು. ನಿನ್ನ ಫೋಟೋಗಳು ವಾಸ್ತವವಾಗಿ ಜೀವನದ ಬಗ್ಗೆಯ ನಿನ್ನ ಹೇಳಿಕೆಗಳಾಗಿರಬೇಕು. ಆದ್ದರಿಂದಲೇ ಯಾವ ಉದ್ದಿಶ್ಯವೂ ಇಲ್ಲದೆ ಇದು ಹೇಗೆ ಬರುತ್ತೆ ನೋಡೋಣ ಎಂದಾಗಲಿ, ಯಾವುದೋ ಒಂದುಕೋನದಿಂದ ಎಷ್ಟು ವಿಚಿತ್ರವಾಗಿ ಕಾಣುತ್ತೆ ಎಂದಾಗಲೀ ನೀನು ತೆಗೆಯುವ ಫೋಟೋಗಳು ಮುಖ್ಯವಾಗುತ್ತವೆ. ಶ್ರೇಷ್ಠ ಛಾಯ ಚಿತ್ರಗಳ ಮುಂದೆ ನಿಂತು ಇದು ಯಾಕೆ ಅಸಾಧಾರಣ ಎಂದೆನ್ನಿಸುತ್ತಿದೆ ಎಂದು ನಿನಗೆ ನೀನೇ ಯೋಚಿಸಬೇಕು. ಆಗ ನಿನಗೆ ನಿಧಾನವಾಗಿ ವರ್ಣಚಿತ್ರಕಾರ ಕುಂಚ ಉಪಯೋಗಿಸಿದಂತೆ, ಬರಹಗಾರ ಪೆನ್ನು ಉಪಯೋಗಿಸಿದಂತೆ ನಿನ್ನ ಯೋಚನೆಗಳನ್ನು, ಭಾವನೆಗಳನ್ನು ನಿನ್ನ ಫೋಟೋಗಳ ಮುಖಾಂತರ ಹೇಳುವುದು ಗೊತ್ತಾಗುತ್ತದೆ".[೩೫]

ತೇಜಸ್ವಿ ಅವರಿಗೆ ಚಿತ್ರಕಲೆಯಲ್ಲೂ ಆಸಕ್ತಿ ಇತ್ತು ಅವರು ಒಂದು ಸಂದರ್ಶನದಲ್ಲಿ "ನಾನು ಅಕ್ಷರ ಕಲಿಯುವುದಕ್ಕಿಂತ ಮೊದಲೆ ಚಿತ್ರ ಬರೆಯಲು

---

[೩೪] ಅಣ್ಣನ ನೆನಪುರ ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಪು.ಸಂ. ೨೦೨

[೩೫] ನನ್ನ ತೇಜಸ್ವಿ – ರಾಜೇಶ್ವರಿ ತೇಜಸ್ವಿ ಪು.ಸಂ. ೪೧೫

ಶುರು ಮಾಡಿದವನು. 'ಇ' ಅಕ್ಷರವನ್ನು ಸುಲಭವಾಗಿ ಮಾರ್ಪಡಿಸಿ ಇಲಿಯನ್ನೂ 'ಬ' ಅಕ್ಷರವನ್ನು ಮಾರ್ಪಡಿಸಿ ಸುಲಭವಾಗಿ ಬಾತನ್ನೂ ಬರೆಯಬಹುದೆಂದು ನಮ್ಮ ತಂದೆಯವರು ತೋರಿಸಿಕೊಟ್ಟ ದಿನದಿಂದಲೇ ಬಹುಶ: ನನಗೆ ಚಿತ್ರ ಬರೆಯುವುದಕ್ಕೆ ಆಸಕ್ತಿ ಶುರುವಾಯ್ತೆಂದು ಹೇಳಬಹುದು. ಮನುಷ್ಯನಿಗೆ ಭಾಷೆ ಮತ್ತು ಸಾಹಿತ್ಯಗಳಿಗಿಂತ ಹೆಚ್ಚು ಚಿತ್ರ ಕಲೆಯೇ ಮೂಲ ಪ್ರವೃತ್ತಿ ಎಂದು ಅನ್ನಿಸುತ್ತದೆ. ಚಿತ್ರಗಳೇ ನಿಧಾನವಾಗಿ ಚಿತ್ರಲಿಪಿಯಾಗಿ, ಅನಂತರ ಲಿಪಿಯಾಗಿ ಅನಂತರ ಸಾಹಿತ್ಯ ಹುಟ್ಟಿದ್ದು ಮನುಷ್ಯನ ಇತಿಹಾಸವನ್ನು ಅವಲೋಕಿಸಿದರೆ ನಮಗೆ ತಿಳಿಯುತ್ತದೆ."[೩೬]

ಈ ಎಲ್ಲಾ ಕ್ಷೇತ್ರಗಳಂತೆಯೇ ಕಂಪ್ಯೂಟರಿನಲ್ಲಿ ಕೂಡ ಆಸಕ್ತಿ ಬೆಳೆಸಿಕೊಂಡಿದ್ದ ತೇಜಸ್ವಿ ಅವರು ಪ್ರತಿಯೊಬ್ಬರೂ ಕೂಡ ಕಂಪ್ಯೂಟರ್‌ನ್ನು ಬಳಸುವುದನ್ನು ತಿಳಿದಿರಬೇಕು ಎಂದವರು. ಆಯಾ ಕಾಲದ ನಾಗರೀಕತೆಗಳಲ್ಲಿ ಸಮರ್ಥವಾಗಿ ಭಾಗವಹಿಸಲು ಕೆಲಕೆಲವು ಕುಶಲತೆಗಳನ್ನು ನಾವು ಕಡ್ಡಾಯವಾಗಿ ತಿಳಿದಿರಲೇಬೇಕಾಗುತ್ತದೆ. ಇಪ್ಪತ್ತನೇ ಶತಮಾನದ ಕೊನೆಯ ಹೊತ್ತಿಗೆ ನಮ್ಮ ನಾಗರಿಕತೆಯೊಳಗೆ ಕಾಲಿಟ್ಟ ಕಂಪ್ಯೂಟರ್ ತಂತ್ರಜ್ಞಾನ ಆ ಶತಮಾನ ಕೊನೆಯಾಗುವ ಹೊತ್ತಿಗಾಗಲೇ ಭಯಂಕರ ವೇಗದಲ್ಲಿ ವಿಕಾಸವಾಗಿ ಸಾರ್ವಜನಿಕ ಜೀವನದ ಎಲ್ಲಾ ರಂಗದಲ್ಲೂ ವ್ಯಾಪಿಸತೊಡಗಿತು. ಕಂಪ್ಯೂಟರ್ ಬಗೆಗಿನ ಪ್ರಾಥಮಿಕ ಜ್ಞಾನ ಬೇರೆ ಬೇರೆ ಕ್ಷೇತ್ರಗಳಲ್ಲಿ ಕಂಪ್ಯೂಟರ್ ಬಗೆಗಿನ ಪ್ರಾಥಮಿಕ ಜ್ಞಾನ ಕಂಪ್ಯೂಟರ್ ಬಳಸುವ ಮುನ್ನ ತಿಳಿದಿರಬೇಕಾದ ಮೂಲ ಅಗತ್ಯವಾಗಿದೆ. ನಾವು ಕಾಲಕ್ಕೆ ತಕ್ಕಂತೆ ಅನುಕೂಲತೆಗೆ ತಕ್ಕಂತೆ ನಾವು ಬದಲಾಗಬೇಕೆಂದು ಹೇಳುತ್ತಾರೆ.

ರವಿಬೆಳೆಗೆರೆ 'ಮೆರವಣಿಗೆ ನೋಡಿ ಬಂದು ಕದವಿಕ್ಕಿ ಹಾಡು ಬರೆವ ಹುಡುಗನಂತೆ' ಎಂಬ ಲೇಖನದಲ್ಲಿ "ತೇಜಸ್ವಿ ಕಂಪ್ಯೂಟರ್ ಮುಟ್ಟಿದ್ದೇ ತಪ್ಪಾಗಿತ್ತು. ವಿಪರೀತವಾದ ಇಂಟರ್‌ನೆಟ್ ಗೀಳು ಬೆಳೆಸಿಕೊಂಡಿದ್ದರು. ಅದರಿಂದಾಗಿ ಅವರ

[೩೬] ಹೊಸ ವಿಚಾರಗಳು – ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಪು.ಸಂ. ೬೦೯

ಬರಹ ಬಳಲಿತು. ಕೈ ಬರಹದ ಕಾಲ ಮುಗಿದು ಕಂಪ್ಯೂಟರಿಗೆ ಕಚ್ಚಿಕೊಂಡ ನಂತರ ತೇಜಸ್ವಿ ತುಂಬ ಕ್ರಿಯಾಶೀಲವಾದದ್ದನ್ನು ಬರೆಯಲಿಲ್ಲ. ಕಂಪ್ಯೂಟರಿಗೆ ಚಿತ್ರಬರೆಯುತ್ತೆನೆಂದು ಹೊರಟರು, ಹೊಸಬರಿಗೆ ತೇಜಸ್ವಿಯವರ ಆರಾಧಕರಿಗೆ ಅದು ಅದ್ಭುತವಾಗಿ ಕಾಣಿಸಿದ್ದು ಹೌದಾದರೂ ಚಿತ್ರ ಕಲೆಯ ಜಗತ್ತಿನಲ್ಲಿ ಅದು ಅಂಥ ಕೌತುಕ ಹುಟ್ಟಿಸಲಿಲ್ಲ. ಅವರ ಕೈಲಿದ್ದ ನಿರ್ಜೀವ ವಸ್ತುಗಳ ಪೈಕಿ ತುಂಬ ಕ್ರಿಯಾಶೀಲವಾಗಿ ಕೆಲಸ ಮಾಡಿದಂಥವೆಂದರೆ ಅವರ ಪೆನ್ನು, ಅವರ ಕ್ಯಾಮರಾ ಮತ್ತು ಗಾಳ. ಕಂಪ್ಯೂಟರಿನಿಂದ ಆದ ಉಪಕಾರವೆಂದರೆ, ಅದರ ಮಿಲೆಯಮ್ ಸರಣಿ. ಅದು ತೇಜಸ್ವಿಯವರ ಸೆಕೆಂಡ್ ಇನ್ನಿಂಗ್ಸು ಅಲ್ಲಿ ಕರಿಯಪ್ಪನ ಬಿರಿಯಾನಿಯ ರುಚಿ ಕಡಿಮೆಯಾಗಿತ್ತು"[೩೭] ಎಂದಿದ್ದಾರೆ.

ರವಿಬೆಳೆಗೆರೆ ಬರೆದಿರುವ ಈ ಅಭಿಪ್ರಾಯವನ್ನು ಪೂರ್ಣವಾಗಿ ಒಪ್ಪಲು ಸಾಧ್ಯವಿಲ್ಲ. ತೆಜಸ್ವಿಯವರಿಗೆ ಎಲ್ಲಾ ಆಸಕ್ತಿ ವಿಷಯಗಳಲ್ಲಿ ಅಷ್ಟು ಗೀಳು ಇದ್ದದ್ದರಿಂದಲೇ ಇಷ್ಟೆಲ್ಲಾ ಸಾಧನೆ ಮಾಡಲು ಸಾಧ್ಯವಾದದ್ದು. ಆ ಗೀಳುಗಳನ್ನು ಬೆಳೆಸಿಕೊಳ್ಳದಿದ್ದರೆ ನಮಗೆ ಅಂಥಹ ಅದ್ಭುತವಾದ ಕೃತಿಗಳು ಸಿಗುತ್ತಿರಲಿಲ್ಲವೇನೋ ಒಂದೊಂದು ಕ್ಷೇತ್ರವನ್ನು ಆಯ್ಕೆ ಮಾಡಿಕೊಂಡು ಅಷ್ಟೆಲ್ಲಾ ತಪಸ್ಸು ಮಾಡಿ ಸಾಧನೆ ಮಾಡುವುದು ತೇಜಸ್ವಿ ಅಂತಹ ಶ್ರೇಷ್ಠ ಲೇಖಕರಿಂದ ಸಾಧ್ಯವಾಗುವುದೇ ಹೊರೆತು, ರವಿಬೆಳೆಗೆರೆ ಅವರಂತಹ ಪತ್ರಕರ್ತ, ನಟರಿಂದಲ್ಲ.

ತೇಜಸ್ವಿ ಅವರು ಯಂತ್ರಗಳ ರಿಪೇರಿ ಕೆಲಸವನ್ನು ಕೂಡ ಅಷ್ಟೇ ಆಸಕ್ತಿಯಿಂದ ಮಾಡುತ್ತಿದ್ದರು. ತೇಜಸ್ವಿ ಅವರ ಅಣ್ಣನ ನೆನಪು ಕೃತಿಯಲ್ಲಿ ಸ್ಕೂಟರ್ ರಿಪೇರಿ ಮಾಡುವ ಸಂದರ್ಭ ಸವಿಸ್ತಾರವಾಗಿ ಮೂಡಿಬಂದಿದೆ. ಅದರಲ್ಲಿ ಒಂದು ಮಾತನ್ನು ಇಲ್ಲಿ ಹೇಳುವುದು ಸೂಕ್ತವೆಂದು ಕಾಣಿಸುತ್ತದೆ. ಕುವೆಂಪುವಿಗೆ ಸ್ಕೂಟರ್ ರಿಪೇರಿ ಮಾಡುತ್ತಾನೆಂದು ನಂಬಿಕೆ ಇಲ್ಲದಿದ್ದಾಗ ಅದನ್ನು ರಿಪೇರಿ ಮಾಡಿ ಆದ ಮೇಲೆ

[೩೭] ತೇಜಸ್ವಿ ನೆನಪು – ಸಂಪಾದಕರು ಬಿ. ಚಂದ್ರೇಗೌಡ, ಬಿ.ಎಲ್.ರಾಜು ಪು.ಸಂ. ೬೨

ಅವರಿಗೆ ತುಂಬಾ ಸಂತೋಷವಾಗುತ್ತದೆ. ಆಗ ತೇಜಸ್ವಿ ಅವರು "ನಾನು ಎಂ.ಎ. ಪಾಸು ಮಾಡಿದಾಗಲೂ ಅಣ್ಣನಿಗೆ ಅಷ್ಟೇನು ಸಂತೋಷವಾಗಿರಲಿಲ್ಲ. ಏಕೆಂದರೆ ಅದನ್ನೆಲ್ಲಾ ಅವರೂ ಸಾಧಿಸಿದ್ದರು. ಆದರೆ ಸ್ಕೂಟರ್ ಸಂಪೂರ್ಣ ಬಿಚ್ಚಿ ರಿಪೇರಿ ಮಾಡಿ ಮತ್ತೆ ಅದನ್ನು ಜೋಡಿಸಿದ್ದು ಅವರ ಜೀವನದಲ್ಲಿ ಅವರು ಸಾಧಿಸದ ಸಾಧನೆಯಾಗಿದ್ದರಿಂದ ನಾನು ನಿಜಕ್ಕೂ ಪ್ರತಿಭಾವಂತನೇ ಇರಬಹುದು ಎಂದು ಅವರಿಗೆ ಅನ್ನಿಸಿರಬೇಕು".[೩೮] ಎಂದು ಹೇಳಿದ್ದಾರೆ.

ತೇಜಸ್ವಿ ಅಪ್ಪ ಕುಲಪತಿಯಾಗಿದ್ದ ಯೂನಿವರ್ಸಿಟಿ, ಅಲ್ಲಿನ ಲಾಬಿ ಬಿಟ್ಟು ನಗರದ ಆತ್ಮ ವಂಚನೆಗಳಿಗೆ ಬೆನ್ನು ಮಾಡಿ ಕಾಡಿನ ಕಡೆ ನಡೆದ ತೇಜಸ್ವಿ ಒಬ್ಬ ಯಶಸ್ವಿ ಕೃಷಿಕರೂ ಹೌದು. ಹಲವಾರು ಕೃಷಿ ಚಳುವಳಿಗಳನ್ನು ಮಾಡಿ ರೈತ ವರ್ಗಕ್ಕೆ ಬೆನ್ನೆಲುಬಾಗಿ ನಿಂತಂತವರು. ಹಲವಾರು ಬೆಳೆಗಳನ್ನು ಬೆಳೆದು ರೈತರ ಕಷ್ಟ ನಷ್ಟಗಳನ್ನು ಸ್ವತಃ ಅರಿತವರು ಸರ್ಕಾರದವರ ಕೃಷಿಸಾಲ ಅದಕ್ಕೆ ಇರುವ ವಿವಿಧ ತಕರಾರು, ಬೆಳೆ ಬೆಳೆದು ಸರಿಯಾದ ಮಾರುಕಟ್ಟೆ ಸಿಗದೆ ರೈತರು ಅನುಭವಿಸುವ ಕಷ್ಟಗಳನ್ನು ಅನುಭವಿಸಿದವರು. ಸರ್ಕಾರವು ರೈತರ ವಿಷಯವಾಗಿ ತಾಳಿರುವ ನಿಲುವನ್ನು ಖಂಡಿಸಿದವರು. ಕೃಷಿ ವಿಜ್ಞಾನಿಗಳ ಬಗ್ಗೆ ಅಸಹನೆ ತಳೆದಿದ್ದರು. "ವಿಜ್ಞಾನಿಗಳು ಬೆಳೆ ಹೇಗೆ ಬೆಳೆಯಬೇಕೆಂದು ಮಾತಾಡುತ್ತಾರೆಯೇ ವಿನಃ ಬೆಳೆದಾದ ಮೇಲೆ ಮುಂದೇನೆಂಬುದು ಅವರಿಗೂ ಗೊತ್ತಿಲ್ಲ. ಮಾರುಕಟ್ಟೆ ವಿಷಯವನ್ನು ಎತ್ತಿಕೊಂಡು ನಾನು ಪ್ರತಿಸಾರಿಯೂ ಜಗಳ ಆಡುತ್ತೇನೆ. ಅವರು ಅದು ಸರ್ಕಾರದ ಜವಾಬ್ದಾರಿ ಎಂದು ಹೇಳುತ್ತಾರೆ. ಅವರದ್ದೇನಿದ್ದರೂ ಬೆಳೆಯುವುದನ್ನು ಹೇಳಿಕೊಡುವುದು".[೩೯] ಎಂದು ತಮ್ಮ ಅಸಹನೆ ವ್ಯಕ್ತಪಡಿಸಿದ್ದರು.

---

[೩೮] ಅಣ್ಣನ ನೆನಪು – ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಪು.ಸಂ. ೧೪೫

[೩೯] ಹೊಸ ವಿಚಾರಗಳು – ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಪು.ಸಂ. ೩೪೯

ತೇಜಸ್ವಿಗೆ ಸಂಗೀತದಲ್ಲೂ ಆಸಕ್ತಿ ಇತ್ತು. ತೇಜಸ್ವಿ ಅವರು ಶಿವಮೊಗ್ಗದಲ್ಲಿ ಓದುತ್ತಿದ್ದಾಗ ಒಮ್ಮೆ ಪಂಡಿತ್ ರವಿಶಂಕರವರ ವಾದ್ಯ ಸಂಗೀತ ಕೇಳಿ ಅಂದಿನಿಂದ ಅವರಿಗೆ ಅದರಲ್ಲಿ ಆಸಕ್ತಿ ಉಂಟಾಯಿತೆಂದು 'ಅಣ್ಣನ ನೆನಪಿನ'ಲ್ಲಿ ಹೇಳಿಕೊಂಡಿದ್ದಾರೆ.

ಹೀಗೆ ಎಲ್ಲಾ ಕ್ಷೇತ್ರಗಳಲ್ಲೂ ಆಸಕ್ತಿ ಹೊಂದಿ ಅದರಲ್ಲಿ ಸಾಧನೆ ಮಾಡಿರುವ ತೇಜಸ್ವಿ ಅವರು ಇಂದಿನ ತಲೆಮಾರಿನ ಯುವಜನತೆಗೆ ಸ್ಫೂರ್ತಿಯಾಗಿದ್ದಾರೆ. ಅವರ ವಿಚಾರಗಳು ಒಂದೊಂದು ಸಂದೇಶವನ್ನು ರವಾನಿಸುತ್ತವೆ. ತೇಜಸ್ವಿ ತಮ್ಮ ಸರಳ ವಿವಾಹದ ಮೂಲಕ ಯುವಜನತೆಗೆ ಅದ್ದೂರಿತನವನ್ನು, ವ್ಯಕ್ತಿತ್ವವೇ ಕಳೆದುಕೊಂಡು ಮದುವೆಯಾಗುವುದನ್ನು ವಿರೋಧಿಸಿದರು. ಅನವಶ್ಯಕವಾಗಿ ಮದುವೆಯಿಂದಾಗುವ ಕಿರಿಕಿರಿಯನ್ನು ಅನುಭವಿಸದೆ ಸರಳ ಮದುವೆಗೆ ಪ್ರಾಮುಖ್ಯತೆ ನೀಡಿ ಎಂದು ಸಾರಿದರು. ಅಂತರ್ಜಾತಿ ವಿವಾಹದಿಂದ ಜಾತಿ ಪದ್ಧತಿ ನಿರ್ಮೂಲನೆಯಾಗಲು ಸಹಕಾರಿಯಾಗುತ್ತದೆ. ಸಾಂಪ್ರದಾಯಿಕ ಕಟ್ಟನ್ನು ಮುರಿಯಿರಿ ಎಂದು ಯುವಜನತೆಗೆ ಸಂದೇಶ ನೀಡಿದರು.

ತಮ್ಮ ಹಲವಾರು ಕ್ಷೇತ್ರಗಳ ಸಾಧನೆಗಳ ಮೂಲಕ ಯಾವುದೇ ಒಂದು ಕ್ಷೇತ್ರದಲ್ಲಿ ತೊಡಗಿಸಿಕೊಳ್ಳಲು ಆಸಕ್ತಿ ಇರಬೇಕೆಂದು ತೋರಿಸಿಕೊಟ್ಟಿದ್ದಾರೆ. ಅವರಿಗಿದ್ದ ಪರಿಸರ ಕಾಳಜಿ, ರೈತರ ಕಾಳಜಿ, ಬೇರೆ ವಿಷಯ ಅರಿಯುವ ಕುತೂಹಲ ಇವೆಲ್ಲವೂ ಇಂದಿನ ಯುವ ಜನಾಂಗಕ್ಕೆ ಮಾದರಿಯಾಗಿವೆ.

ಇಂದಿನ ಪೀಳಿಗೆಯ ಯುವಕರು ಶಿಕ್ಷಣವನ್ನು ಮುಗಿಸಿ ಗ್ರಾಮವನ್ನು ಬಿಟ್ಟು ಪಟ್ಟಣ ಸೇರುತ್ತಿದ್ದಾರೆ. ಪಟ್ಟಣಗಳಲ್ಲಿಯೇ ಕೆಲಸ ಮಾಡುವುದು ಒಂದು ಪ್ರತಿಷ್ಠೆ ಎಂಬ ಭಾವನೆ ಎಲ್ಲರ ಮನದಲ್ಲಿ ಮೂಡಿದೆ. ನಗರದಲ್ಲಿ ಹುಟ್ಟಿದ ಬೆಳೆದ ತೇಜಸ್ವಿ ಎಲ್ಲವನ್ನು ತೊರೆದು ಕಾಡಿನ ಸೆಳೆತಕ್ಕೆ ಒಳಗಾದರು. ಕೃಷಿಕ ವೃತ್ತಿಯನ್ನು ಆರಿಸಿಕೊಂಡಂತಹ ರೀತಿ ನಮ್ಮ ಯುವ ಜನಾಂಗಕ್ಕೆ ಮಾದರಿ. ಯಾವ ವೃತ್ತಿಯೂ

ಮೇಲಲ್ಲ, ಯಾವುದೂ ಕೀಳಲ್ಲ ಎಂಬ ಅರಿವನ್ನು ನಮ್ಮ ಯುವ ಜನತೆ ಅರಿತುಕೊಳ್ಳಬೇಕಾಗಿದೆ. ಚಿಕ್ಕ ವಿಷಯಗಳನ್ನು ಬೆರಗುಗಣ್ಣಿನಿಂದ ನೋಡುವ ಸಂಗತಿಯನ್ನು ತಿಳಿದುಕೊಳ್ಳಬೇಕಾಗಿದೆ, ಸ್ವತಂತ್ರ್ಯವಾಗಿ ಸ್ವಾವಲಂಬನೆಯ ಬದುಕನ್ನು ನಮ್ಮ ಯುವ ಜನತೆ ಕಲಿತುಕೊಳ್ಳಬೇಕಾಗಿದೆ.

ತೇಜಸ್ವಿಯನ್ನು ಒಂದು ಸಂದರ್ಶನದಲ್ಲಿ ನಿಮ್ಮ ಆಸಕ್ತಿ ಸಂಚಾರಿಭಾವದ್ದು ಎಂದು ಕೇಳಿದಾಗ "ನಾನು ಕಣ್ಣಿಗೆ ಕಂಡಿದ್ದನ್ನೆಲ್ಲಾ ಆಸಕ್ತಿಯಿಂದ ಕುತೂಹಲದಿಂದ ನೋಡುತ್ತಾ ತಿಳಿಯುತ್ತಾ ಹೋಗುತ್ತೇನೆ. ಜ್ಞಾನಾರ್ಜನೆಯ ಪ್ರಚಂಡ ಸಂತೋಷ ಇರುವುದು ಇಲ್ಲೇ. ಕಾಲೇಜಿನಲ್ಲಿ ಏನು ಮಾಡಿದರೂ ಕಲಿಯಲು ಅಸಾಧ್ಯವಾಗಿದ್ದ ಅತಿ ಜಟಿಲ ವಿಷಯಗಳೆಲ್ಲಾ ನೀರು ಕುಡಿದಷ್ಟು ಸುಲಭವಾಗಿ ಜೀವನದಲ್ಲಿ ಕಲಿಯುತ್ತಾ ಹೋಗಬಹುದು. ನಮ್ಮ ವಿದ್ಯಾಭ್ಯಾಸದ ಕ್ರಮವೇ ಸಂಪೂರ್ಣ ತಪ್ಪಾಗಿದ್ದೆಂದು ನನಗನ್ನಿಸುತ್ತದೆ. ಬದುಕುತ್ತಾ ಬದುಕಿಗೆ ಅಗತ್ಯವಾದ್ದನ್ನೆಲ್ಲಾ ತಿಳಿದುಕೊಳ್ಳುತ್ತಾ ಹೋಗುವ ಹೊಸ ಬಗೆಯ ವಿದ್ಯಾರ್ಜನೆಯ ಮಾರ್ಗಗಳನ್ನು ನಾವು ಅನ್ವೇಷಿಸಬೇಕು. ಬದುಕಿನ ಅಗತ್ಯಗಳಿಗೆ ತಕ್ಕಂತೆ ಗಳಿಸಿಕೊಳ್ಳುತ್ತಾ ಹೋಗುವ ವಿದ್ಯೆ ನಿಜಕ್ಕೂ ಚೇತೋಹಾರಿಯಾದದ್ದು. ಕಾಲೇಜಿನಲ್ಲಿ ನನಗೆ ಜ್ಞಾನಾರ್ಜನೆ ಎಂದರೆ ಯಮಯಾತನೆಯಾಗುತ್ತಿತ್ತು. ಈಗಲೂ ನನಗೆ ಒಮ್ಮೊಮ್ಮೆ ಪರೀಕ್ಷೆಯ ಕನಸುಗಳು ಬಿದ್ದು ನಿದ್ದೆಗೆಡುತ್ತೇನೆ. ಈಗ ಸಹ ನಾನು ಕಲಿತಿರುವುದಕ್ಕೆಲ್ಲಾ ಒಂದೊಂದು ಪರೀಕ್ಷೆ ಇದೆ ಎಂದು ನೀನು ಹೇಳಿದರೆ ಸಾಕು, ನನ್ನ ತಲೆ ಕ್ಷಣಾರ್ಧದಲ್ಲಿ ಖಾಲಿಯಾಗುತ್ತದೆ.

ಸಂಚಾರಿ ಆಸಕ್ತಿ ಎಂದು ಹೇಳುವುದಕ್ಕಿಂತ ವಿಸ್ತಾರವಾದದ್ದು ಎಂದು ಹೇಳಿದರೆ ಸರಿ. ಫೋಟೋಗ್ರಫಿ, ಕೃಷಿ, ಸಂಗೀತ, ಬರವಣಿಗೆ ಇವನ್ನೆಲ್ಲಾ ಬೇರೆ ಬೇರೆ ನಾಮಕರಣ ಮಾಡಿ ನಾವು ವರ್ಗೀಕರಿಸಿದ್ದೇವೆಯೆ ಹೊರತು ಇವೆಲ್ಲದರ ಒಳಹೊಕ್ಕು ನೋಡಿದರೆ ಒಂದರೊಳಗೊಂದು ಸಂಯೋಜನೆಗೊಂಡಿರುವುದು ಕಾಣುತ್ತದೆ. ಉದಾಹರಣೆಗೆ ಫೋಟೋಗ್ರಫಿಯ ಅನೇಕ ಶಿಸ್ತುಗಳು ಬೇರೆ ಬೇರೆ ರೀತಿಯಿಂದ

ಸಾಹಿತ್ಯದಲ್ಲೂ, ಸಂಗೀತದಲ್ಲೂ ಇರುವುದನ್ನು ಕಾಣಬಹುದು".[೪೦] ಇಂತಹ ಎಲ್ಲಾ ವಿಚಾರಗಳನ್ನು ನಮ್ಮ ಪೀಳಿಗೆ ಮೈಗೂಡಿಸಿಕೊಳ್ಳಬೇಕಾದದ್ದು ಬಹಳಷ್ಟು ಇದೆ.

---

[೪೦] ತೇಜಸ್ವಿ ನೆನಪು – ಸಂಪಾದಕರು ಬಿ. ಚಂದ್ರೇಗೌಡ, ಬಿ.ಎಲ್. ರಾಜು ಪು.ಸಂ. ೧೬೧

# ಅಧ್ಯಾಯ-೭

## 'ನನ್ನ ತೇಜಸ್ವಿ'ಯ ರಾಜೇಶ್ವರಿಯವರು ಕಂಡಂತೆ

'ನನ್ನ ತೇಜಸ್ವಿ'ಯಲ್ಲಿ ರಾಜೇಶ್ವರಿಯವರು ಕಂಡಂತೆ ತೇಜಸ್ವಿಯ ವಿವಿಧ ಮುಖಗಳನ್ನು ಪರಿಚಯಿಸಿದ್ದಾರೆ. ಇದರ ಮೂಲಕ ತೇಜಸ್ವಿಯನ್ನು ಇನ್ನು ಆಳವಾಗಿ ತಿಳಿದುಕೊಳ್ಳಬಹುದು. ತೇಜಸ್ವಿಯನ್ನು ಕಾಡು ರೂಪಿಸಿತು ಎಂದು ಒತ್ತಿ ಹೇಳುತ್ತಿದ್ದರು. ನಾಡನ್ನು ಬಿಟ್ಟು ಕಾಡಿನ ಕಡೆ ಮುಖಮಾಡಿದ ತೇಜಸ್ವಿ ಮತ್ತೆಂದೂ ಹಿಂತಿರುಗಿದ್ದೇ ಇಲ್ಲ ತೇಜಸ್ವಿ ಪರಿಸರದ ನಿಗೂಢ ರಹಸ್ಯವನ್ನು ಬೇಧಿಸುತ್ತಾ ಹೋದರು. ಅದರ ಪ್ರತಿಫಲವೇ ಅವರ ಸಾಹಿತ್ಯ ಕೃಷಿ. ತಮ್ಮ ಸುತ್ತಲಿನ ಸಾಮಾನ್ಯರೇ ತೇಜಸ್ವಿಯರ ಕೃತಿಗಳಲ್ಲಿ ಅಸಾಮಾನ್ಯವಾಗಿ ಅವಕಾಶ ಪಡೆದುಕೊಂಡರು.

ತೇಜಸ್ವಿ ಸಾಮಾಜಿಕವಾಗಿ ತನ್ನ ನೆರೆಹೊರೆಯಲ್ಲಿ ಏನಾದರೂ ತೊಂದರೆಯಾಗುತ್ತಿದ್ದರೆ ಅದನ್ನು ನೋಡಿಕೊಂಡು ಸುಮ್ಮನೆ ಕೂರುವವರಲ್ಲ. ಅದನ್ನು ಪ್ರತಿಭಟಿಸಿ ಅದಕ್ಕೆ ಪರಿಹಾರ ಸಿಗುವವರೆಗೂ ಹೋರಾಡುವಂತಹವರು ಇದಕ್ಕೆ ಅವರು ಮಾಡಿದ ಚಳುವಳಿಗಳೇ ಸಾಕ್ಷಿ.

ತೇಜಸ್ವಿ ಕನ್ನಡಿಗರಿಗೆ ಅತಿಕಡಿಮೆ ಬೆಲೆಯಲ್ಲಿ ಕನ್ನಡ ಪುಸ್ತಕಗಳು ಓದುಗರಿಗೆ ಸಿಗಬೇಕು ಎಂದು ಪ್ರಕಾಶನವನ್ನು ಕೂಡ ಮಾಡಿ ಸಫಲರಾದವರು. ಇದರ ಮೂಲಕ ಸಾವಿರಾರು ಜನರಿಗೆ ಕಡಿಮೆ ಬೆಲೆಯಲ್ಲಿ ಉತ್ತಮ ದರ್ಜೆಯ ಪುಸ್ತಕಗಳನ್ನು ಲಕ್ಷಾಂತರ ಕನ್ನಡಿಗರಿಗೆ ಒದಿಗಿಸಿಕೊಟ್ಟಂತವರು.

ತೇಜಸ್ವಿಯನ್ನು ಯಾರಾದರೂ ವಿಜ್ಞಾನ ಲೇಖಕರೆಂದು ಕರೆದರೆ ತೇಜಸ್ವಿ ಮನುಷ್ಯ ಇರಬೇಕಾದದ್ದು ಆಗಲ್ಲವೆ? ಒಬ್ಬ ಮನುಷ್ಯ ತನ್ನ ಪರಿಸರವನ್ನು

ಸುತ್ತಮುತ್ತಲಿನ ಆಗು ಹೋಗುಗಳನ್ನು ಗಮನಿಸದೆ ಇರಲು ಸಾಧ್ಯವೆ? ಎಂದು ಮರುಪ್ರಶ್ನಿಸುತ್ತಿದ್ದರು.

**ತೇಜಸ್ವಿ ಚಳುವಳಿವೊಂದಿಗಿನ ಮುಖಾಮುಖಿ:**

ತೇಜಸ್ವಿ, ನಂಜುಂಡಸ್ವಾಮಿ, ಕಡಿದಾಳು ಶಾಮಣ್ಣ, ಎನ್.ಡಿ. ಸುಂದರೇಶ್, ಬಿ.ಎನ್.ಶ್ರೀರಾಂ, ಕೆ.ರಾಮದಾಸರು ಇವರೆಲ್ಲರೂ ಒಂದಲ್ಲ ಒಂದು ಚಳುವಳಿಗೆ ಧುಮುಕುತ್ತಿದ್ದರು. ಜಾತಿ ವಿನಾಶ ಚಳುವಳಿ, ಭಾಷಾ ಚಳುವಳಿ, ದಲಿತ ಚಳುವಳಿ, ರೈತ ಚಳುವಳಿ, ಕನ್ನಡ ಸಾಹಿತ್ಯ ಚಳುವಳಿ, ಈ ಚಳುವಳಿಗಳು ಅವರನ್ನು ಮುಖ್ಯವಾಗಿ ಸೆಳೆದಿದ್ದವು.

ಒಮ್ಮೆ ಶೃಂಗೇರಿಯಲ್ಲಿ ಅಂತರ್ಜಾತಿ ವಿವಾಹದಿಂದಾಗಿ ವಧುವಿನ ಮಾತಾಪಿತೃಗಳು ಬ್ರಾಹ್ಮಣರಿಂದ ತಿರಸ್ಕೃತರಾದ ಘಟನೆ ಮತ್ತು ಹೆಣ್ಣು ಮಕ್ಕಳು ಆತ್ಮಹತ್ಯೆ ಮಾಡಿಕೊಳ್ಳುವ ಪ್ರಸಂಗ ತೇಜಸ್ವಿ ಗಮನಕ್ಕೆ ಬಂದಾಗ ಅಲ್ಲೊಂದು ಸಮಾವೇಶ ನಡೆಸಿ ಅವರಿಗೆ ಧೈರ್ಯ ತುಂಬಿದ್ದರು. ಆ ಸಮಾವೇಶದಲ್ಲಿ "ಒಬ್ಬ ಮೋಚಿಯ ಮಗನಾದ ಸ್ಟಾಲಿನ್ ನಾಯಕನಾದ, ಆದರೆ ಈ ದೇಶದಲ್ಲಿ ಅಂಬೇಡ್ಕರರಾಗಲಿ, ಜಗಜೀವನರಾಮರಾಗಲಿ ಅಸಹನೀಯ ವೇದನೆಯಿಂದ ತಮ್ಮ ಅಂತ್ಯಕಂಡು ಕೊಂಡರು. ಶೃಂಗೇರಿ ಏರಿಯಾದಲ್ಲಿ ಒಬ್ಬ ಹರಿಜನ, ಬ್ರಾಹ್ಮಣ ಮದುವೆಯಾದ ಪ್ರಯುಕ್ತ ಸೃಷ್ಟಿಗೊಂಡ ಬಹಿಷ್ಕಾರದ ಈ ಕೃತ್ಯದ ಸಮಯದಲ್ಲಿ ನಾವೆಲ್ಲ ಒಂದು ಬದಲಾವಣೆಯತ್ತ ಯೋಚಿಸಬೇಕಿದೆ. ಅಂತರ್ಜಾತಿ ವಿವಾಹವಾದವರಿಗೆ ಸರಕಾರಿ ನೌಕರಿ ಮೀಸಲಾತಿಯಲ್ಲಿ ಶೇಕಡ ೫ ರಂತೆ ಮೀಸಲಾತಿ ದೊರಕಿಸಿಕೊಡುವುದು. ಆ ದಂಪತಿಗಳಿಗೆ ಎಲ್ಲಾ ವಿಧದ ರಕ್ಷಣೆಯನ್ನಲ್ಲದೆ ಒಂದು ತಲೆಮಾರಿನವರಿಗೆ ಶಿಕ್ಷಣದಲ್ಲಿ ಮೀಸಲಾತಿಕೊಡುವುದು,

ಹಾಗೂ ಈ ಅಂತರ್ಜಾತಿ ವಿವಾಹಿತರ ಸಂತತಿಯೆಲ್ಲಾ ಜಾತಿಯ ಕಾಲಂಗಳಲ್ಲಿ ಭಾರತೀಯ ಎಂದು ನಮೂದಿಸುವುದು".[೪೧] ಎಂದು ಹೇಳಿದ್ದರು.

ಸ್ವತ: ರೈತನಾಗಿ ರೈತರ ಕಷ್ಟಗಳನ್ನು ಅರಿತಿದ್ದ ತೇಜಸ್ವಿ ರೈತರ ಮೇಲೆ ಸರ್ಕಾರ ಮಾಡುತಿರುವ ದಬ್ಬಾಳಿಕೆಯನ್ನು ಸಹಿಸುತ್ತಿರಲಿಲ್ಲ. ೧೯೮೫ ನವೆಂಬರ್ ನಲ್ಲಿ ರೈತ ಸಭೆಯಲ್ಲಿ ಸರ್ಕಾರದ ಮೊಂಡುತನದ ಬಗ್ಗೆ ಸಂಪೂರ್ಣವಾಗಿ ಅರಿತುಕೊಂಡು ವಿಮರ್ಶಾತ್ಮಕವಾಗಿ ಮಾತನಾಡಿದ ತೇಜಸ್ವಿ ಒಂದು ಕತೆಯ ಮೂಲಕ ಅದನ್ನು ವಿಶ್ಲೇಷಿಸುತ್ತಾರೆ. ಅದೆಂದರೆ, " ಈ ರೈತ ಹೋರಾಟವನ್ನು ನೋಡಿದರೆ ನನಗೆ ಒಂದು ಕತೆ ನೆನಪಿಗೆ ಬರುತ್ತದೆ. ಒಂದು ಊರಿನಲ್ಲಿ ಒಬ್ಬ ಉತ್ತಮ ಶಿಲ್ಪಿ ಇದ್ದನಂತೆ. ಆತ ಬಹಳ ಕಷ್ಟಪಟ್ಟುಕೊಂಡು ಒಬ್ಬ ರಾಜನಿಗೆ ಒಂದು ಅರಮನೆಯನ್ನು ಕಟ್ಟಿಕೊಟ್ಟನಂತೆ. ರಾಜ ಆ ಅರಮನೆಯನ್ನು ನೋಡಿ ಬಹಳವಾಗಿ ಮೆಚ್ಚಿಕೊಂಡು. ತಕ್ಷಣ ಅವನ್ ಮನಸ್ಸಿನಲ್ಲಿ ಒಂದು ದುರಾಲೋಚನೆ ಹುಟ್ಟಿಕೊಂಡಿತು. ಈ ಶಿಲ್ಪಿಯನ್ನು ಹೀಗೆ ಬಿಟ್ಟರೆ ಆತ ಇನ್ನೊಬ್ಬ ರಾಜನಿಗೆ ಇನ್ನೊಂದು ಚೆಂದದ ಅರಮನೆಯನ್ನು ಕಟ್ಟಿಕೊಡುತ್ತಾನಲ್ಲವೆ ಎಂದು ಭಾವಿಸಿದ ಆ ರಾಜ ಆ ಶಿಲ್ಪಿಯ ಬಲಗೈಯನ್ನು ಕತ್ತರಿಸಿ ಹಾಕಿಸಿ ಬಿಟ್ಟ.

ಆ ಶಿಲ್ಪಿ ತನ್ನ ಬಲಗೈ ಹೋದರೂ ಚಿಂತಿಸದೆ ಕಷ್ಟಪಟ್ಟು ಕೊಂಡು ಇನ್ನೊಬ್ಬ ರಾಜನಿಗೆ ಮತ್ತೊಂದು ಸುಂದರ ಅರಮನೆಯನ್ನು ಕಟ್ಟಿಕೊಡುತ್ತಾನೆ. ಮತ್ತೆ ಈ ರಾಜನಿಗೂ ಕೂಡ ಮೊದಲನೆ ರಾಜನಿಗೆ ಬಂದ ದುರಾಲೋಚನೆಯೇ ಬರುತ್ತದೆ. ಹಾಗಾಗಿ ಈ ಶಿಲ್ಪಿಯ ಎಡಗೈಯನ್ನು ಈ ರಾಜ ಕತ್ತರಿಸಿ ಹಾಕಿಸುತ್ತಾನೆ.

ಆ ಶಿಲ್ಪಿ ಛಲ ಬಿಡದೆ ತ್ರಿವಿಕ್ರಮನಂತೆ ತನ್ನೆರಡೂ ಕಾಲುಗಳಲ್ಲೇ ಮತ್ತೊಬ್ಬ ರಾಜನಿಗೆ ಇನ್ನೊಂದು ಭವ್ಯ ಅರಮನೆ ಕಟ್ಟಿಕೊಡುತ್ತಾನೆ. ಇವನನ್ನು ಹೀಗೆ ಬಿಟ್ಟರೆ

---

[೪೧] ನನ್ನ ತೇಜಸ್ವಿ – ರಾಜೇಶ್ವರಿ ತೇಜಸ್ವಿ ಪು.ಸಂ. ೩೨೦, ೩೨೧.

* ಪೂರ್ಣಚಂದ್ರ ತೇಜಸ್ವಿಯವರ 'ಹೊಸ ವಿಚಾರಗಳು' ಎನ್ನುವ ಪುಸ್ತಕದಲ್ಲಿ ಚಳುವಳಿಯ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಿದೆ.

ಈತ ಇನ್ನೊಬ್ಬ ರಾಜನಿಗೆ ಇನ್ನೊಂದು ಅರಮನೆ ಕಟ್ಟಿಕೊಡುತ್ತಾನೆ. ಇವನ ತಲೆಯನ್ನೇ ಕತ್ತರಿಸಿ ಹಾಕಿಬಿಡಿ ಎಂದು ಈ ರಾಜ ಹೇಳುತ್ತಾನೆ. ರೈತರು ಮತ್ತು ಸರ್ಕಾರದ ಕತೆ ಇದಕ್ಕಿಂತ ಭಿನ್ನವೇನಲ್ಲ."[೪೨] ಎಂದು ಕತೆಯ ಮೂಲಕ ರೈತರ ಪರಿಸ್ಥಿತಿಯನ್ನು ತಿಳಿಸಿದ ತೇಜಸ್ವಿ ಸರ್ಕಾರದ ವಿರುದ್ಧ ಧರಣಿ ಕುಳಿತೆ ಯಾವುದೇ ಪ್ರಯೋಜನವಿಲ್ಲ ನಾವು ಸಂಧಾನದ ಮೂಲಕ ಸಮಸ್ಯೆ ಪರಿಹರಿಸಿಕೊಳ್ಳಬೇಕು. ಆವೇಶದಿಂದ ಏನನ್ನೂ ಸಾಧಿಸಲಾಗದು ಆವೇಶದ ಹೋರಾಟದಿಂದ ನಮ್ಮ ಹೆಣಗಳು ಉರುಳುತ್ತವೆ. ಇದಂತೂ ನನಗೆ ಇಷ್ಟವಿಲ್ಲವೆಂದು ರೈತರಿಗೆ ತಿಳಿಸಿ ಹೇಳಿದ್ದರು.

೧೯೭೧ ರಲ್ಲಿ ಪತ್ರಿಕೆಯೊಂದರಲ್ಲಿ "ಇರಾನಿ ಷಾಗೆ ಸಂಜಯಗಾಂಧಿಯಿಂದ ಕುದುರೆ ಮುಖದಲ್ಲಿನ ಅದಿರು ಆಮದಿಗೆ ಅಪ್ಪಣೆಯಾಗಿದೆ."[೪೩] ಎಂಬ ವರದಿ ಪ್ರಕಟವಾಗಿದ್ದನ್ನು ಓದಿ ತೇಜಸ್ವಿಯವರು "ಇನ್ನು ನಮ್ಮ ನದಿಗಳ ಕತೆ ಮುಗಿದಂತೆಯೇ, ನದಿಗಳು ಕಪ್ಪಾಗಿ ಹರಿಯುತ್ತವೆ ಎಂದರು."[೪೪] ಈ ಗಣಿಗಾರಿಕೆ ವಿರೋಧಿಸಲು ಯಾವ ಸಂಘಟನೆಯೂ ಇಲ್ಲದಿದ್ದ ಸಂದರ್ಭದಲ್ಲಿ ತೇಜಸ್ವಿ ಅವರೇ ಭಾಷಣ ಮಾಡಿ, ಜನರೊಡನೆ ಮಾತನಾಡಿ ಬರುತ್ತಿದ್ದರು. ಈ ಹೋರಾಟದ ಫಲವಾಗಿ ಗಣಿಗಾರಿಕೆ ನಿಲ್ಲಿಸಲು ಹಲವು ವರ್ಷಗಳು ಶ್ರಮಿಸಿದರು. ಕೋರ್ಟಿನಲ್ಲಿ ಮೊಕದ್ದಮೆ ಹೂಡಿದ್ದರಿಂದ ಕೊನೆಯದಾಗಿ ಮೊಕದ್ದಮೆ ಸುಪ್ರೀಂಕೋರ್ಟಿಗೂ ತಲುಪಿ ಅಂತಿಮವಾಗಿ ೨೦೦೫ ರಲ್ಲಿ ಗಣಿಗಾರಿಕೆಯನ್ನು ಸ್ಥಗಿತಗೊಳಿಸುವಂತೆ ಸುಪ್ರೀಂ ಕೋರ್ಟು ಆದೇಶ ನೀಡಿತು. ಇದರಿಂದ ಇನ್ನು ಯಾರೇನು ಮಾಡುವಂತಿಲ್ಲವೆಂದು ತೇಜಸ್ವಿ ನೆಮ್ಮದಿಯಿಂದ ನಿಟ್ಟುಸಿರಿಸಿಟ್ಟರು.

---

[೪೨] ನನ್ನ ತೇಜಸ್ವಿ – ರಾಜೇಶ್ವರಿ ತೇಜಸ್ವಿ ಪು.ಸಂ. ೩೨೨

[೪೩] ನನ್ನ ತೇಜಸ್ವಿ – ರಾಜೇಶ್ವರಿ ತೇಜಸ್ವಿ ಪು.ಸಂ. ೩೨೫

[೪೪] ನನ್ನ ತೇಜಸ್ವಿ – ರಾಜೇಶ್ವರಿ ತೇಜಸ್ವಿ ಪು.ಸಂ. ೩೨೬

ಕಾಫಿಯನ್ನು ಮುಕ್ತ ಮಾರುಕಟ್ಟೆ ಮುಖಾಂತರವೇ ಮಾರುವಂತೆ ಮುಕ್ತ ಮಾರುಕಟ್ಟೆಗೆ ಕಾರಣರಾದವರು ತೇಜಸ್ವಿ ಅವರು. ಕಾಫಿ ಬೆಳೆಗಾರರ ಬೋರ್ಡಿನ ಅವ್ಯವಹಾರದಿಂದಾಗಿ ಕಂಗೆಟ್ಟ ಕಾಫಿ ಬೆಳೆಗಾರರು ಹೋರಾಟ ಮಾಡಿ ತೇಜಸ್ವಿ ಅವರು ಭಾಷಣ ಇವೆಲ್ಲದರ ಕಾರಣದಿಂದಾಗಿ ೧೯೯೩ ರಲ್ಲಿ ಕಾಫಿ ಮುಕ್ತ ಮಾರುಕಟ್ಟೆಯನ್ನು ಎದುರಿಸಿತು. ಒಂದು ಮುಟೆಗೆ ಎಳನೂರು ರೂಪಾಯಿಗೆ ಕಾಫಿ ಮಾರಾಟವಾಗುತ್ತಿದ್ದದ್ದು ಮುಕ್ತ ಮಾರುಕಟ್ಟೆಯಿಂದಾಗಿ ಏಳು ಸಾವಿರವನ್ನು ಮುಟ್ಟಿತು. ಇಂತಹ ಎಲ್ಲಾ ಚಳುವಳಿಗಳ ಮೂಲಕ ತೇಜಸ್ವಿ ಸಾಮಾನ್ಯರ ಪ್ರತಿನಿಧಿಯಾಗಿದ್ದರು.

## ತೇಜಸ್ವಿ ಮತ್ತು ಪ್ರಕೃತಿಯೊಂದಿಗಿನ ಒಡನಾಟ:

ಕುವೆಂಪು ಮಲೆನಾಡನಿಂದ ನಗರಕ್ಕೆ ಹೋದವರು. ತೇಜಸ್ವಿ ನಾಡಿನಿಂದ ಕಾಡಿಗೆ ಬಂದವರು ಕಾಡು ತೇಜಸ್ವಿಯನ್ನು ರೂಪಿಸಿತು. ತೇಜಸ್ವಿ ತಮ್ಮ ಬದುಕನ್ನು ತೆರೆದುಕೊಂಡಂತೆಲ್ಲಾ ಅದು ರೂಪಿಸುತ್ತಾ ಹೋಯಿತು. ಕುವೆಂಪು ಅವರ ಬರವಣಿಗೆ ಸಮೃದ್ಧಗೊಳ್ಳುವುದು ಪ್ರಕೃತಿಯ ಜೀವಂತ ವಿವರಗಳಿಂದ. ಕುವೆಂಪು ಅವರಿಗೆ ಕಾಜಾಣದ ಸೌಂದರ್ಯ ಮತ್ತು ಅದರ ಧ್ವನಿ ಮುಖ್ಯವಾದರೆ, ತೇಜಸ್ವಿಗೆ ಅದರ ಬದುಕಿನ ವಿವರಗಳು ಮುಖ್ಯವಾಗುತ್ತದೆ. ಕುವೆಂಪುರವರ ಮುಂದುವರೆದ ಭಾಗವಾಗಿ ತೇಜಸ್ವಿಯವರ ಪ್ರಾಕೃತಿಕ ಬರವಣಿಗೆಗಳಿವೆ.

'ಮಲೆಗಳಲ್ಲಿ ಮದುಮಗಳು' ಕೃತಿಯ ನಾಯಿಗುತ್ತಿ ಪ್ರಕೃತಿಯ ಶಿಶುವಾದರೆ, 'ಕರ್ವಾಲೋ' ಕಾದಂಬರಿಯ ಮಂದಣ್ಣ ಕೂಡ ಪ್ರಕೃತಿಯ ಶಿಶುವಾಗಿದ್ದಾನೆ. ತೇಜಸ್ವಿ, ಜಗತ್ತನ್ನು ನೋಡುತ್ತಿದ್ದ ಪರಿ ನೋಡು ನೋಡುತ್ತಿದ್ದಂತೆ ಅವರನ್ನು ರೂಪಿಸುತ್ತಾ ಹೋಯಿತು.

ತೇಜಸ್ವಿಗೆ ೧೯೬೧ ರಲ್ಲಿಯೇ ಕಾಡು ಮತ್ತು ಬದುಕು ಬೆಸೆದು ಕೊಂಡಿತು. ಅಲ್ಲಿಂದ ಕಾಡಿನ ನಿಗೂಢಗಳನ್ನು ಭೇದಿಸಿದರು. ಆ ನಿಗೂಢವನ್ನು ಭೇದಿಸಿದಕ್ಕೆ ಇವರಿಗೆ ಸಿಕ್ಕಿದ್ದು ಅದರ ರಹಸ್ಯ ಕರ್ವಾಲೋ, ಚಿದಂಬರ ರಹಸ್ಯ, ಪರಿಸರದ ಕತೆಯಂತಹ ಆದರ್ಶವಿರಬಹುದು. ತೇಜಸ್ವಿ ರಾಜೇಶ್ವರಿಯವರ ತವರು 'ಭೂತನ ಕಾಡಿ'ನ ಸೌಂದರ್ಯಕ್ಕೆ ಮಾರು ಹೋಗಿದ್ದರು. ಅವರು "ಭೂತ ಕಾಡಿನ ದಟ್ಟ ಅಡವಿ, ಸೂರ್ಯ ಭೂಮಿಗೇ ಇಳಿಯಕ್ಕಾಗದಂತೆ. ಆಗ ನೋಡಿದವರ ನೆತ್ತಿ ಕದಡುವಂತಿದೆ ಎನ್ನುತ್ತಿದ್ದರು ತೇಜಸ್ವಿ. ಈ ಅಡವಿಯಲ್ಲಿ ಕಾಡೆಮ್ಮೆ ಸಾಲು, ಕಾಡು ಕುರಿ, ಕಾಡು ಹಂದಿ ಗುಂಪು, ಕಬ್ಬೆಕ್ಕು, ಹಾರು ಬೆಕ್ಕು, ಮುಳ್ಳುಹಂದಿ, ಚಿಪ್ಪಿಗ, ಮೊಲ, ನವಿಲು, ನರಿ, ಬಾವಲಿ ಮೊದಲಾದವುಗಳನ್ನು ನೋಡಿ ನಿಬ್ಬೆರಗಾಗಿದ್ದರು ತೇಜಸ್ವಿ ಕಿವಿ ಸಂಗಡ, ಕೋವಿ ಹಿಡಿದು ಇಂಚಿಂಚು ಕಾಡಿನ ಬಗ್ಗೆ 'ಅರಿವು' ಅಂತರ್ಯಕ್ಕೆ ಇಳಿಸಿಕೊಳ್ಳುತ್ತಾ ಠಳಾಯಿಸುತ್ತಿದ್ದಿರಬಹುದು".[೪೫]

ತೇಜಸ್ವಿ ಅವರ ಮನೆಯ ಮುಂದಿದ್ದ ದೂಪ ಮರಕ್ಕೆ ಕಾಂಟ್ರಾಕ್ಟರನು ಕೊಡಲಿ ಕಾಣಿಸಿದನು ಇದರಿಂದಾಗಿ ತೇಜಸ್ವಿ ತುಂಬಾ ಮರುಗಿದರು. "ಆ ಮರದ ಹಣ್ಣುಗಳನ್ನು ತಿನ್ನಲು ಗುಮ್ಮಾಡಲು ಹಕ್ಕಿಗಳು ಬಂದಿದ್ದನ್ನು ನೋಡಿದ್ದರಂತೆ. ಅವು ದೊಡ್ಡ ಗಾತ್ರದ ಹಕ್ಕಿಗಳು, ಹಣ್ಣುಗಳೂ ಅಷ್ಟೇ. ಗುಮ್ಮಾಡಲು ಹಕ್ಕಿಯ ಕರುಳು ಆ ಹಣ್ಣನ್ನು ತಿಂದು ಜೀರ್ಣಿಸಿಕೊಳ್ಳುವಂತೆ ರಚನೆಯಾಗಿರುತ್ತೆ. 'ಎವಲ್ಯೂಷನ್'ನಲ್ಲಿ ಹಾಗೆ ಆಗುತ್ತಾ ಬಂದಿರುತ್ತೆ. ಮರವೇ ಇಲ್ಲದ ಮೇಲೆ ಅವಕ್ಕೆ ಆಹಾರವಾದರೂ ಎಲ್ಲಿ ಸಿಗಬಹುದು. ಇದು ಹಕ್ಕಿಯ ಉಳಿವಿಕೆಗೆ ಧಕ್ಕೆಯಲ್ಲವೆ ತೇಜಸ್ವಿ ಹೇಳುತ್ತಿದ್ದ ಮಾತು".[೪೬]

---

[೪೫] ನನ್ನ ತೇಜಸ್ವಿ – ರಾಜೇಶ್ವರಿ ತೇಜಸ್ವಿ ಪು.ಸಂ. ೩೭೧, ೩೭೨
[೪೬] ನನ್ನ ತೇಜಸ್ವಿ – ರಾಜೇಶ್ವರಿ ತೇಜಸ್ವಿ ಪು.ಸಂ. ೩೭೨

ತೇಜಸ್ವಿ ಪ್ರಕೃತಿ ಒಬ್ಬರಿಗೆ ಮಾತ್ರ ಸೀಮಿತವಲ್ಲ ಎಲ್ಲಾ ಜೀವಿಗಳಿಗೂ ಬದುಕುವ ಹಕ್ಕಿದೆ. ಸರ್ವರಿಗೆ ಸಮಪಾಲು, ಸರ್ವರಿಗೆ ಸಮಬಾಳು ಎನ್ನುವ ಅರಿವು ಕೇವಲ ಮನುಷ್ಯರಿಗೆ ಮಾತ್ರ ಅನ್ವಯಿಸುವುದಿಲ್ಲ. ಎಲ್ಲಾ ಜೀವಿಗಳಿಗೂ ಇದು ಅನ್ವಯವಾಗಬೇಕು ಎಂದು ಯೋಚಿಸಿದವರು. ಅರಿವಿನ ಜ್ಞಾನ ದೊಡ್ಡದಾದಂತೆಲ್ಲ ವಿಸ್ತಾರವೂ ತೆರೆದುಕೊಳ್ಳುತ್ತಾ ಹೋಗುತ್ತೆ. ತುದಿ ಮುಟ್ಟಿದೆವು ತಲುಪಿದೆವು ಎನ್ನುವಂತೆಯೇ ಇಲ್ಲ. ಎಲ್ಲೆಯೇ ಇಲ್ಲ ಎಂಬುದನ್ನು ನಿರಂತರವಾಗಿ ಚಿಂತಿಸುತ್ತಿದ್ದರು ಇದು ಅವರ ನಡುವಿನ ಪ್ರಕೃತಿಯಿಂದ ಬಂದ ಅರಿವಾಗಿತ್ತು.

**ತೇಜಸ್ವಿಯವರ ಸಾಮಾಜಿಕ ಬದುಕು:**

ತೇಜಸ್ವಿ ಒಬ್ಬ ಕವಿಯಾಗಿ, ಯಶಸ್ವಿ ರೈತನಾಗಿ, ಪ್ರಕೃತಿ ವಿಜ್ಞಾನಿಯಾಗಿ, ಛಾಯಾಗ್ರಾಹಕನಾಗಿ ಬದುಕಿದವರು. ಅವರು ತಮ್ಮ ಸುತ್ತಲಿನ ಸಮಾಜವನ್ನು ಅತ್ಯಂತ ಸೂಕ್ಷ್ಮವಾಗಿ ನೋಡುತ್ತಿದ್ದರು. ತನ್ನ ಸುತ್ತಲಿನ ಸಮಾಜಕ್ಕೆ ಅಪಾಯ ಕಾಣಿಸಿಕೊಂಡರೆ ತಕ್ಷಣ ಸಹಾಯಕ್ಕೆ ಬರುತ್ತಿದ್ದರು ತೇಜಸ್ವಿ.

ತೇಜಸ್ವಿಯವರ ಕಾಳಜಿ ಸಾಹಿತ್ಯಕ್ಕೆ ಮಾತ್ರ ಸೀಮಿತವಲ್ಲ. ಅವರು ತಮ್ಮ ಜನರ ಸಾಮಾಜಿಕ, ಆರ್ಥಿಕ ಪರಿಸ್ಥಿತಿಯ ಬಗ್ಗೆ ಇಟ್ಟುಕೊಂಡಿದ್ದ ಆಳವಾದ ಕಾಳಜಿಯ ದ್ಯೋತಕವಾಗಿ ರೈತರ ಬಗೆಗಿನ ಚಳುವಳಿಗಳು ಈಗ ಇತಿಹಾಸ. ಅವರ ಹೋರಾಟ ಅನೇಕ ವಿಧದ ಬೆಳೆ ಬೆಳೆಯುವ ಎಲ್ಲಾ ರೈತರ ಒಳಿತಿಗಾಗಿ, ರೈತರ ಹೋರಾಟಕ್ಕೆ ಬೆಂಬಲ, ರೈತರಿಗೆ ಸರ್ಕಾರದಿಂದಾಗುವ ಅನ್ಯಾಯ, ತಾರತಮ್ಯ ಶೋಷಣೆ ಇವೆಲ್ಲಕ್ಕೂ ದನಿ ಎತ್ತಿದ್ದಾರೆ.

ಗಣಿಗಾರಿಕೆ ಬಂದು ತಮ್ಮ ಸುತ್ತಲಿನ ಪರಿಸರವನ್ನು ಹದಗೆಡಿಸುತ್ತಿದ್ದಾಗ ತೇಜಸ್ವಿ, ಎಲ್ಲರ ಜೊತೆ ಸೇರಿ, ಹೋರಾಟ ಮಾಡಿ ಅದನ್ನು ತಡೆದವರು. ತಮ್ಮ ಪರಿಸರವನ್ನು ಸೂಕ್ಷ್ಮವಾಗಿ ಗಮನಿಸಿ ಸಾಹಿತ್ಯ ಸೃಷ್ಟಿಸಿದಂತವರು. ಅವರ ಕೃತಿಯಲ್ಲಿ

ಬರುವ ಪಾತ್ರಗಳು ಅವರ ಸುತ್ತಲಿದ್ದ ಸಾಮಾನ್ಯ ಜನರೇ ಆಗಿರುತ್ತಿದ್ದವು. ತೇಜಸ್ವಿ ಒಂದು ಸಂದರ್ಶನದಲ್ಲಿ "ಕಾದಂಬರಿ ಪಾತ್ರಗಳು ಎದ್ದು ಬಂದು ಲೇಖಕನನ್ನು ಪ್ರಶ್ನೆ ಕೇಳಿದ ಸಂದರ್ಭ ಬಹುಶಃ ನನ್ನ ಬಿಟ್ಟರೆ ಬೇರೆ ಯಾವ ಲೇಖಕನಿಗೂ ಅದರ ಅನುಭವವಾಗಿಲ್ಲವೇನೋ ಕರಿಯಪ್ಪ, ಹಾವಿನ ವೆಂಕ್ಟ ಕಾದಂಬರಿಯ ಬಗ್ಗೆ ತಿಳಿದುಕೊಂಡು ಕೋಪದಿಂದ ಲೇಖಕರನ್ನು ಪ್ರಶ್ನಿಸಿದ್ದು ಉಂಟು" ಎಂದು ಹೇಳುತ್ತಾರೆ. ತೇಜಸ್ವಿಯವರ ಸಾಮಾಜಿಕ ಬದುಕೇ ಅವರ ಸಾಹಿತ್ಯ ಸೃಷ್ಟಿಗೆ ಕಾರಣ. ವಿವಿಧ ದೃಷ್ಟಿಕೋನದಿಂದ ಸಮಾಜವನ್ನು ನೋಡಿ ತೇಜಸ್ವಿ ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿದರು.

# ಅಧ್ಯಾಯ-೮

## ಸಮಾರೋಪ

ತೇಜಸ್ವಿ ಕುವೆಂಪು ಅವರ ಮಗನಾಗಿ ಹುಟ್ಟಿ ಬೆಳೆದದ್ದು ಮೈಸೂರೆಂಬ ಮಹಾನಗರದಲ್ಲಿ, ಅಪ್ಪ ಕುಲಪತಿಯಾಗಿದ್ದ ವಿಶ್ವವಿದ್ಯಾಲಯ ಮತ್ತು ಅಲ್ಲಿನ ಲಾಬಿ ಬಿಟ್ಟು ನಗರದ ಆತ್ಮವಂಚನೆಗಳಿಗೆ ಬೆನ್ನು ಮಾಡಿ ಕಾಡಿನ ಮಡಿಲಿಗೆ ಹೋದರು. ಶ್ರೇಷ್ಠ ಲೇಖಕ ಮಹಾಕವಿ ಕುವೆಂಪುರವರ ಮಗನಾಗಿ ಅವರ ಪ್ರಭಾವಕ್ಕೆ ಒಳಗಾಗದೆ ಕಾಡಿನ ಜೊತೆ ಅನುಸಂಧಾನ ಮಾಡುತ್ತಾ ಸ್ವಾತಂತ್ರ್ಯ ಜೀವನ ನಡೆಸಿದರು.

ತೇಜಸ್ವಿ ಬರೆದ ಪ್ರಾರಂಭದ ಕಥೆಗಳಲ್ಲಿ ಅವರ ಸ್ವಾತಂತ್ರ್ಯವಾಗಿ ಬದುಕುವ ತುಡಿತ ವ್ಯಾಕ್ತವಾಗಿದೆ. 'ನನ್ನ ತೇಜಸ್ವಿ' ಕೃತಿಯಲ್ಲಿ ಆ ತುಡಿತ ಅವರ ಪತ್ರಗಳ ಮೂಲಕ ತೀವ್ರ ತರವಾಗಿ ವ್ಯಕ್ತವಾಗಿದೆ. ಸ್ವಾವಲಂಬಿಯಾಗಿ ಬದುಕಲು ಅವರು ತಮ್ಮ ಪ್ರೇಮ ಸಂಬಂಧವನ್ನು ೬ ವರ್ಷಗಳ ಕಾಲ ಮುಂದುವರೆಸಿ ಸ್ವಾವಲಂಬಿಯಾದ ನಂತರವೇ ಮದುವೆಯಾದರು.

ಅಷ್ಟೇ ಅಲ್ಲದೆ ಜಾತಿ, ಧರ್ಮಗಳ ಎಲ್ಲೆಯನ್ನು ದಾಟಿ ಕುವೆಂಪುರವರ 'ಮಂತ್ರ ಮಾಂಗಲ್ಯ', 'ವಿಶ್ವ ಮಾನವ ಸಂದೇಶ' ವನ್ನು ಸ್ವತಃ ಅನುಸರಿಸಿ ಇಡೀ ಸಮಾಜಕ್ಕೆ ಮಾದರಿಯಾದ ವ್ಯಕ್ತಿತ್ವ ತೇಜಸ್ವಿಯವರದ್ದು. ಕುವೆಂಪುರವರ ಧ್ಯೇಯ ಧೋರಣೆಗಳನ್ನು 'ಸರಳ ವಿವಾಹವಾಗುವ' ಮೂಲಕ, ಸರಳವಿವಾಹದಿಂದ ಸಮಾಜ ಸುಧಾರಣೆಯಾಗುತ್ತದೆ, ಅಂತರ್ಜಾತಿ ವಿವಾಹಗಳಿಗೆ ಹೆಚ್ಚಿನ ಮನ್ನಣೆಕೊಟ್ಟರೆ ಜಾತಿ ನಿರ್ಮೂಲನೆ ನಿಧಾನಗತಿಯಲ್ಲಾದರೂ ಆಗುತ್ತದೆ ಎಂದು 'ಸರಳ ವಿವಾಹವನ್ನು' ತಾವೇ ಆಗುವುದರ ಮೂಲಕ ಪ್ರಚಲಿತಕ್ಕೆ ತಂದವರು ತೇಜಸ್ವಿ.

ತೇಜಸ್ವಿ ಒಬ್ಬ ಲೇಖಕರಲ್ಲ, ಅವರೊಬ್ಬ ಕ್ರಾಂತಿಕಾರಿಯೂ ಹೌದು, ಛಾಯಾಚಿತ್ರಗ್ರಾಹಕರೂ ಹೌದು, ಕೃಷಿಕರೂ ಹೌದು, ಹಾಡುಗಾರರೂ ಹೌದು, ಒಂದು ರೀತಿಯ ವಿಜ್ಞಾನಿಯೂ ಹೌದು. ಅವರ ನಿಲುವುಗಳು ಇಂದಿನ ಸಮಾಜಕ್ಕೆ ದಾರಿದೀಪವಾಗಿವೆ. ಇಂದಿನ ಸಮಾಜ ಜಾತಿ, ಧರ್ಮಗಳ ಸಂಘರ್ಷಗಳಿಂದಾಗಿ ಅಶಾಂತಿಯ ವಾತಾವರಣ ನಿರ್ಮಾಣವಾಗಿದೆ, ವರದಕ್ಷಿಣೆ, ಅದ್ದೂರಿ ವಿವಾಹ, ಮಾಲ್ ಸಂಸ್ಕೃತಿಯಿಂದಾಗಿ ಸಮಾಜದಲ್ಲಿ ಅಂತರ, ಅಂತಸ್ತು ನಿರ್ಮಾಣವಾಗಿದೆ. ಅಲ್ಲದೆ ನಮ್ಮ ಯುವಕರು ಓದಿ ಕೆಲಸವೊಂದನ್ನು ಗಿಟ್ಟಿಸಿಕೊಂಡರೆ ಸಾಕಪ್ಪಾ ಎನ್ನುವ ಸಂದರ್ಭದಲ್ಲಿ ತೇಜಸ್ವಿ ಅವರ ಬದುಕಿನ ತತ್ವಗಳು ನಮ್ಮ ಸಮಾಜಕ್ಕೆ ಅವಶ್ಯಕವೆಂದು ನನ್ನ ಆಶಯವಾಗಿದೆ.

ಈ ದೃಷ್ಟಿಯಲ್ಲಿ ತೇಜಸ್ವಿ ಮತ್ತು ಅವರ ಬದುಕು ಮತ್ತು ಅವರ ತತ್ವಗಳು ಎಲ್ಲರಿಗೂ ಅವಶ್ಯಕ. ಈ ನಿಟ್ಟಿನಲ್ಲಿ ನನ್ನ ಅಧ್ಯಯನದ ಮೂಲಕ ಈ ಎಲ್ಲಾ ವಿಚಾರಗಳನ್ನು ಹೇಳಲು ಪ್ರಯತ್ನಿಸುತ್ತಿದ್ದೇನೆ. ಇಂತಹ ಅಧ್ಯಯನಗಳು 'ಕತ್ತಲಿರುವ ಸಮಾಜಕ್ಕೆ ದಾರಿ ದೀಪದಂತೆ' ಇಂತಹ ಅಧ್ಯಯನಗಳು ಇನ್ನು ಹೆಚ್ಚು-ಹೆಚ್ಚು ಬರಬೇಕೆಂಬುದು ನನ್ನ ಆಶಯವಾಗಿದೆ.

# ಗ್ರಂಥ ಋಣ

೧) ನನ್ನ ತೇಜಸ್ವಿ - ರಾಜೇಶ್ವರಿ ತೇಜಸ್ವಿ
ಪ್ರಕಾಶಕರು -ಪುಸ್ತಕ ಪ್ರಕಾಶನ ಮೈಸೂರು-೨೦೧೩

೨) ಅಣ್ಣನ ನೆನಪು - ಕೆ.ಪಿ. ಪೂರ್ಣಚಂದ್ರ ತೇಜಸ್ವಿ
ಪ್ರಕಾಶಕರು -ಪುಸ್ತಕ ಪ್ರಕಾಶನ ಮೈಸೂರು-೨೦೧೪

೩) ಹೊಸ ವಿಚಾರಗಳು- ಕೆ.ಪಿ.ಪೂರ್ಣಚಂದ್ರ ತೇಜಸ್ವಿ
ಪ್ರಕಾಶಕರು -ಪುಸ್ತಕ ಪ್ರಕಾಶನ ಮೈಸೂರು-೨೦೧೨

೪) ವಿಮರ್ಶೆಯ ವಿಮರ್ಶೆ- ಕೆ.ಪಿ.ಪೂರ್ಣಚಂದ್ರ ತೇಜಸ್ವಿ
ಪ್ರಕಾಶಕರು -ಪುಸ್ತಕ ಪ್ರಕಾಶನ ಮೈಸೂರು-೨೦೧೩

೫) ಚಿದಂಬರ ರಹಸ್ಯ - ಕೆ.ಪಿ.ಪೂರ್ಣಚಂದ್ರ ತೇಜಸ್ವಿ
ಪ್ರಕಾಶಕರು -ಪುಸ್ತಕ ಪ್ರಕಾಶನ ಮೈಸೂರು-೨೦೦೯

೬) ಕರ್ವಾಲೊ - ಕೆ.ಪಿ.ಪೂರ್ಣಚಂದ್ರ ತೇಜಸ್ವಿ
ಪ್ರಕಾಶಕರು -ಪುಸ್ತಕ ಪ್ರಕಾಶನ ಮೈಸೂರು-೨೦೦೭

೭) ಜುಗಾರಿ ಕ್ರಾಸ್ - ಕೆ.ಪಿ.ಪೂರ್ಣಚಂದ್ರ ತೇಜಸ್ವಿ
ಪ್ರಕಾಶಕರು -ಪುಸ್ತಕ ಪ್ರಕಾಶನ ಮೈಸೂರು-೨೦೦೬

೮) ಅಬಚೂರಿನ ಪೋಸ್ಟಾಫೀಸು- ಕೆ.ಪಿ.ಪೂರ್ಣಚಂದ್ರ ತೇಜಸ್ವಿ
ಪ್ರಕಾಶಕರು -ಪುಸ್ತಕ ಪ್ರಕಾಶನ ಮೈಸೂರು-೨೦೧೪

೯) ಕಿರಗೂರಿನ ಗಯ್ಯಾಳಿಗಳು -ಕೆ.ಪಿ.ಪೂರ್ಣಚಂದ್ರ ತೇಜಸ್ವಿ
ಪ್ರಕಾಶಕರು -ಪುಸ್ತಕ ಪ್ರಕಾಶನ ಮೈಸೂರು-೨೦೧೪

೧೦) ಹುಲಿಯೂರಿನ ಸರಹದ್ದು - ಕೆ.ಪಿ.ಪೂರ್ಣಚಂದ್ರ ತೇಜಸ್ವಿ
ಪ್ರಕಾಶಕರು -ಪುಸ್ತಕ ಪ್ರಕಾಶನ ಮೈಸೂರು-೨೦೧೪

೧೧) ಮಗಳು ಕಂಡ ಕುವೆಂಪು- ತಾರಿಣಿ ಚಿದಾನಂದ

ಪ್ರಕಾಶಕರು -ಪುಸ್ತಕ ಪ್ರಕಾಶನ ಮೈಸೂರು-೨೦೧೨

೧೨) ಕನ್ನಡ ಸಾಹಿತ್ಯ ಚರಿತ್ರೆ - ತ.ಸು. ಶಾಮರಾಯ

ಪ್ರಕಾಶಕರು-ಉದಯರವಿ ಆಫ್‌ಸೆಟ್ ಪ್ರಿಂಟರ್ಸ್,

ಮೈಸೂರು-೨೦೦೧.

೧೩) ಹೊಸಗನ್ನಡ ಸಾಹಿತ್ಯ ಚರಿತ್ರೆ- ಎಲ್.ಎಸ್. ಶೇಷಗಿರಿ ರಾವ್.

ಪ್ರಕಾಶಕರು-ಅಂಕಿತ ಪುಸ್ತಕ, ಬೆಂಗಳೂರು ೨೦೦೮.

೧೪) ಕನ್ನಡ ಜೀವನ ಚರಿತ್ರೆ – ಎಂ.ವಿ.ಸೀತರಾಮಯ್ಯ

ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟಣೆ.

೧೫) ತೇಜಸ್ವಿ ನೆನಪು - ಸಂಪಾದಕರು ಬಿ.ಚಂದ್ರೇಗೌಡ, ಬಿ.ಎಲ್.ರಾಜು

ಪ್ರಕಾಶಕರು-ನಂದಿ ಪ್ರೋಸೆಸ್, ಬೆಂಗಳೂರು-೨೦೦೭

೧೬) ಕನ್ನಡ ಸಾಹಿತ್ಯ ಕೋಶ- ಸಂಪಾದಕರು ರಾಜಪ್ಪ ದಳವಾಯಿ

ಪ್ರಕಾಶಕರು-ಕದಿರು ಪ್ರಕಾಶನ, ಮೈಸೂರು-೨೦೦೩

೧೭) ರಾಷ್ಟ್ರಕವಿ ಕುವೆಂಪು ನೂರರ ನಮನ- ಕರ್ನಾಟಕ ಸರ್ಕಾರ

ಪ್ರಕಟಣೆ-ಜಿಲ್ಲಾಡಳಿತ ಹಾಸನ.

* * * * *

